# ಬಸವಧರ್ಮ ದರ್ಶನ

ರಂಜಾನ್ ದರ್ಗಾ

ಪ್ರಕಾಶಕರು

ವಿಮೋಚನಾ ಸಂಸ್ಥೆ ಅಥಣಿ

**BASAVADHARMA DARSHANA**

A Collection of Articles by Ramjan Darga
Chief Administrative Officer
Sarvajna Group of Educational Institutions
High Court Ring Road, GULBARGA -585102
Mobile: 9242470384
E-mail: ramjandarga@gmail.com

Published by
**Dr. V.S. Mali**
Director, Vimochana Publications

**Shri B.L. Patil**
President, Vimochana Sangh
Athani : 591 304, District Belgaum
Mobile : +91 94484 61043
Email : vimochanasangh@rediffmail.com

First Impression : 2015



ISBN : 978-81-930761-0-1

Paper used : 70 GSM NS Maplitho

Pages : 154

Copies : 1000

Price : Rs. 75

Cover Design : Manjunath

Book Layout : Sathyakumari
9945428692

ಸ್ವಾನ್ ಪ್ರಿಂಟರ್ಸ್
www.svanprinters.com
☎ 080-2674 2233

# ಪ್ರಕಾಶಕರ ಮಾತು

ದೇವರು, ಧರ್ಮ ಮುಂತಾದ ನಂಬಿಕೆಯ ಹೆಸರಿನಲ್ಲಿ ಹೆಣ್ಣುಮಕ್ಕಳು ಕಲ್ಲುದೇವರಿಗೆ ಮದುವೆ ಮಾಡಿಕೊಂಡು ಉಳ್ಳವರ ಭೋಗದ ವಸ್ತುವಾಗುತ್ತಿದ್ದಾರೆ. ಹೀಗೆ ವೇಶ್ಯಾವಾಟಿಕೆಗೆ ತಳ್ಳಿದ ಪರಿಣಾಮವಾಗಿ ಹುಟ್ಟಿದ ಹೆಣ್ಣುಮಕ್ಕಳು ಅದೇ ವೇಶ್ಯಾವೃತ್ತಿಗೆ ಇಳಿಯುವ ದುರಂತ ಸ್ಥಿತಿ ಇದೆ. ಅನೇಕ ಸಲ ಅವರು ಅಂತರ್‍ರಾಷ್ಟ್ರೀಯ ಮಟ್ಟದಲ್ಲಿ ಕಳ್ಳಸಾಗಣೆ ವಸ್ತುಗಳಾಗುತ್ತಿದ್ದಾರೆ! ಹೀಗೆ ನಮ್ಮ ದೇಶದ ಅನೇಕ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳು ವಿವಿಧ ದೇಶಗಳ ವೇಶ್ಯಾಗೃಹಗಳನ್ನು ಸೇರುತ್ತಿದ್ದಾರೆ.

ಕರ್ನಾಟಕ-ಮಹಾರಾಷ್ಟ್ರ ಗಡಿಪ್ರದೇಶದಲ್ಲಿ ದೇವರ ಹೆಸರಿನಲ್ಲಿ ವೇಶ್ಯಾವಾಟಿಕೆ ನಡೆಸುವ ದೇವದಾಸಿ ಪದ್ಧತಿಯನ್ನು ಕೊನೆಗಾಣಿಸುವ ಉದ್ದೇಶದಿಂದ ಬಿ.ಎಲ್. ಪಾಟೀಲರು ೧೯೮೫ರಲ್ಲಿ ವಿಮೋಚನಾ (ದೇವದಾಸಿ ಪುನರ್ವಸತಿ) ಸಂಘವನ್ನು ಅಥಣಿಯಲ್ಲಿ ವಿಧ್ಯುಕ್ತವಾಗಿ ಸ್ಥಾಪಿಸಿ ದೇವದಾಸಿ ಮತ್ತು ಇನ್ನಿತರ ನೊಂದ ಬೆಂದ ಮಕ್ಕಳ ಬಾಳಿನಲ್ಲಿ ಬೆಳಕು ಮೂಡಿಸುವುದಕ್ಕಾಗಿ ಮತ್ತು ಗ್ರಾಮೀಣ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ. ಸಂಸ್ಥೆಯ ಕಾರ್ಯವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿ ಶತಮಾನಗಳಿಂದ ಅವಕಾಶ ವಂಚಿತ ದೇವದಾಸಿ ಮಕ್ಕಳು ಇಂದು ತಲೆಯೆತ್ತಿ ಸಮಾಜದ ಮುಖ್ಯವಾಹಿನಿಯಲ್ಲಿ ಬದುಕುತ್ತಿದ್ದು, ಬಾಳಿಗೆ ಹೊಸ ಮುನ್ನುಡಿ ಬರೆದಿದ್ದಾರೆ.

ಇಂದು ಈ ಸಂಘ ತನ್ನ ಕಾರ್ಯಕ್ಷೇತ್ರವನ್ನು ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲ್ಲೂಕಿಗೂ, ಗುಲಬರ್ಗಾ ಜಿಲ್ಲೆಯ ಚಿತ್ತಾಪುರಕ್ಕೂ, ಕೊಪ್ಪಳ ಜಿಲ್ಲೆಯ ಗಂಗಾವತಿಗೂ ವಿಸ್ತರಿಸಿ ೧೫೦೦ ರಷ್ಟು ದೇವದಾಸಿ ಮುಂತಾದ ನತದೃಷ್ಟ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳುತ್ತಿದೆ. ಜಗತ್ತಿನಾದ್ಯಂತ ಹರಡಿರುವ ದಾನಿಗಳ ನೆರವು, ಸಂಘ-ಸಂಸ್ಥೆಗಳ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಹಕಾರದಿಂದಾಗಿ ಈ ಯಶಸ್ಸನ್ನು ಸಾಧಿಸಲಾಗಿದೆ.

ಅಥಣಿ ಸಮೀಪದ ಮಲಾಬಾದ ಗ್ರಾಮದಲ್ಲಿ ವಿಮೋಚನಾ ಸಂಘ ಪ್ರಾರಂಭಿಸಿದ ವಸತಿ ಶಾಲೆಯು ದೇವದಾಸಿ ಮಕ್ಕಳಿಗಾಗಿ ಇರುವ ದೇಶದ ಏಕಮೇವ ವಸತಿ ಶಾಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇಲ್ಲಿ ಉಚಿತ ಊಟ, ವಸತಿ, ಬಟ್ಟೆ, ಶಾಲಾ

ಉಪಕರಣ ಮತ್ತು ವೈದ್ಯಕೀಯ ನೆರವು ನೀಡಲಾಗುತ್ತಿದೆ. ಇಲ್ಲಿ ಅಭ್ಯಸಿಸಿದ ಸಹಸ್ರಾರು ಮಕ್ಕಳಿಂದು ಘನತೆವೆತ್ತ ಹೊಸ ಜೀವನ ನಡೆಸುತ್ತಿದ್ದಾರೆ. ಹೀಗೆ ದೇವದಾಸಿ ಮತ್ತು ಅಸ್ಪೃಶ್ಯತೆಗಳಂಥ ಸಾಮಾಜಿಕ ಕಳಂಕಗಳಿಂದ ಮುಕ್ತವಾದ ನವಸಮಾಜ ನಿರ್ಮಾಣವೇ ಸಂಸ್ಥೆಯ ಗುರಿಯಾಗಿದೆ. ದೇವದಾಸಿ ಮಕ್ಕಳಿಗೆ ಶಿಕ್ಷಣದ ಜೊತೆಗೆ ಸ್ವಯಂ ಉದ್ಯೋಗ ತರಬೇತಿ ನೀಡಿ ಸಮಾಜದ ಮುಖ್ಯ ವಾಹಿನಿಗೆ ತರುವ ಹಾಗೂ ಸಮಗ್ರ ಗ್ರಾಮೀಣ ಅಭಿವೃದ್ಧಿಯ ಕನಸುಗಳೊಂದಿಗೆ ಇಡೀ ಕರ್ನಾಟಕ ರಾಜ್ಯವನ್ನು ಕಾರ್ಯವ್ಯಾಪ್ತಿಗೆ ತರುವ ಉದ್ದೇಶವನ್ನು ಸಂಸ್ಥೆ ಹೊಂದಿದೆ.

ಸಂಘದ ಅಡಿಯಲ್ಲಿ ಈಗಾಗಲೇ ವಿಮೋಚನಾ ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ಪದವಿ ಪೂರ್ವ ಕಾಲೇಜು, ವಿಮೋಚನಾ ಕನ್ನಡ ಕಾನ್ವೆಂಟ್ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ. ವಿಮೋಚನಾ ಶುಶ್ರೂಷಾ ಶಾಲೆಯನ್ನು ೨೦೦೧ರಲ್ಲಿ ಪ್ರಾರಂಭಿಸಿ ೪೬ ಜನ ದೇವದಾಸಿ ಮಕ್ಕಳಿಗೆ ನರ್ಸಿಂಗ್ ತರಬೇತಿ ನೀಡಲಾಯಿತು. ಅವರಿಂದು ರಾಜ್ಯದ ಸರ್ಕಾರಿ ಮತ್ತು ಖಾಸಗಿ ಆಸ್ಪತ್ರೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಮಹಾಂತ ಶಿವಯೋಗಿಗಳ ಅಧ್ಯಕ್ಷತೆಯಲ್ಲಿ ವಿಮೋಚನಾ ವಸತಿ ಶಾಲೆಯ ಮಕ್ಕಳ ಊಟೋಪಚಾರದ ವ್ಯವಸ್ಥೆಗಾಗಿ 'ಶ್ರೀ ಗುರುಬಸವ ಪ್ರಸಾದ ಟ್ರಸ್ಟ್' ಸ್ಥಾಪಿಸಲಾಗಿದೆ. ಐದು ಲಕ್ಷ ರೂಪಾಯಿಗಳ ಮೂಲ ಧನದೊಂದಿಗೆ ಆರಂಭವಾದ ವಿಮೋಚನಾ ವಿವಿಧೋದ್ದೇಶಗಳ ಸಹಕಾರಿ ಸಂಘವನ್ನು ೨೦ ವರ್ಷಗಳ ವರೆಗೆ ನಡೆಸಲಾಯಿತು. ೬೫೦ ದೇವದಾಸಿಯರು ಇದರ ಸದಸ್ಯರಾಗಿದ್ದರು. ದೇಶದಲ್ಲೇ ದೇವದಾಸಿಯರ ಮೊದಲ ಸಹಕಾರಿ ಸಂಘ ಇದಾಗಿತ್ತು.

ವಿಮೋಚನಾ ಪ್ರಕಾಶನದ ಮೂಲಕ ೧೯೮೬ ರಿಂದ ಇಲ್ಲಿಯವರೆಗೆ ೬೫ ಗ್ರಂಥಗಳನ್ನು ಪ್ರಕಟಿಸಿದ್ದು ಅವುಗಳಲ್ಲಿ ಕೆಲವು ವಿವಿಧ ಪ್ರಶಸ್ತಿಗೆ ಭಾಜನವಾಗಿವೆ. ಎರಡು ಪುಸ್ತಕಗಳು ಕರ್ನಾಟಕ ವಿಶ್ವವಿದ್ಯಾಲಯದ ಪಠ್ಯ ಪುಸ್ತಕಗಳಾಗಿವೆ. ಗ್ರಾಮೀಣ ಜ್ಞಾನಕೇಂದ್ರವನ್ನು ಆರಂಭಿಸಲಾಗಿದ್ದು ೨೦೦ ಗ್ರಾಮೀಣ ಯುವಕರನ್ನು ಕಂಪ್ಯೂಟರ್‌ನಲ್ಲಿ ತರಬೇತಿಗೊಳಿಸಲಾಗಿದೆ. ಆರೋಗ್ಯ ಇಲಾಖೆಯ ಸಹಕಾರದೊಂದಿಗೆ, ಸಂಚಾರಿ ಆರೋಗ್ಯ ಸೇವೆಯ ಮೂಲಕ ಗಡಿ ಭಾಗದ ೮ ಹಳ್ಳಿಗಳಲ್ಲಿ ಉಚಿತ ಚಿಕಿತ್ಸೆ ಮತ್ತು ಔಷಧಿ ನೀಡಲಾಗುತ್ತಿದೆ. ಇಳಕಲ್ ಶ್ರೀಗಳಾದ ಮಹಾಂತಪ್ಪಗಳ ನೇತೃತ್ವದಲ್ಲಿ ದುಶ್ಚಟಗಳ ವಿರುದ್ಧ ಜನಜಾಗೃತಿ ಮೂಡಿಸುವುದಕ್ಕಾಗಿ ಎರಡು ಬಾರಿ 'ಮಹಾಂತ ಜೋಳಿಗೆ' ಸಂಚಾರ ಏರ್ಪಡಿಸಲಾಗಿತ್ತು. ಲಿಂಗೈಕ್ಯ ಡಾ. ಎಸ್.ಜಿ. ನಾಗಲೋಟಿಮಠ ಅವರ ಮಾರ್ಗದರ್ಶನದಲ್ಲಿ ಎರಡು ಬಾರಿ ಏಡ್ಸ್ ಪತ್ತೆ ಹಚ್ಚುವ ಶಿಬಿರಗಳನ್ನು ಏರ್ಪಡಿಸಲಾಗಿತ್ತು. ಇಂಥ ವಿವಿಧ ಸೇವೆಗಳಲ್ಲಿ ವಿಮೋಚನಾ ಸಂಸ್ಥೆ ತೊಡಗಿದೆ.

ಮೂಲತಃ ವಕೀಲರಾಗಿರುವ ಬಿ.ಎಲ್. ಪಾಟೀಲರು ಇಳಕಲ್ ಮಹಾಂತ ಶಿವಯೋಗಿಗಳ ಮಾರ್ಗದರ್ಶನದಲ್ಲಿ ಈ ರೀತಿಯ ಲೋಕೋಪಯೋಗಿ ಕಾರ್ಯಗಳನ್ನು ಆಯಾಸವಿಲ್ಲದೆ ಮಾಡುತ್ತಿದ್ದಾರೆ. ಲಂಡನ್‌ನಲ್ಲಿರುವ ಬಸವ ಅಂತರ್‌ರಾಷ್ಟ್ರೀಯ ಪ್ರತಿಷ್ಠಾನದ ಸಂಸ್ಥಾಪಕ ಕಾರ್ಯದರ್ಶಿಯಾಗಿದ್ದಾರೆ. ಪ್ರತಿಷ್ಠಿತ ಕೆ.ಎಲ್.ಇ. ಸಂಸ್ಥೆಯ ಉಪಾಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ಅವರ ಸಮಾಜಸೇವೆಯನ್ನು ಗುರುತಿಸಿ ಅನೇಕ ಪ್ರಶಸ್ತಿಗಳು ಅವರನ್ನು ಹುಡುಕಿಕೊಂಡು ಬಂದಿವೆ.

೧೯೯೭-೯೮ನೇ ವರ್ಷದ ಶ್ರೇಷ್ಠ ಸಾಮಾಜಿಕ ಕಾರ್ಯಕರ್ತರೆಂದು ಇಂಡಿಯನ್ ಎಕ್ಸ್‌ಪ್ರೆಸ್ ಗುಂಪಿನವರು ಗುರುತಿಸಿದ್ದಾರೆ. ನವದೆಹಲಿಯ ಭಾರತೀಯ ನಾಗರಿಕ ಸಂಸ್ಥೆ ೧೯೯೮ರಲ್ಲಿ "ಶ್ರೇಷ್ಠ ನಾಗರಿಕ ಪ್ರಶಸ್ತಿ" ನೀಡಿ ಗೌರವಿಸಿದೆ. ೨೦೦೫ ರಲ್ಲಿ ನಾಡೋಜ ಪತ್ರಿಕೆ ಪ್ರಶಸ್ತಿ ಲಭಿಸಿದೆ. ೨೦೦೬ ರಲ್ಲಿ ರಾಮ ಮನೋಹರ ಲೋಹಿಯಾ ಪ್ರಶಸ್ತಿ ಮತ್ತು ಫ.ಗು. ಹಳಕಟ್ಟಿ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ನಾಲ್ವಡಿ ಕೃಷ್ಣರಾಜ ಪ್ರಶಸ್ತಿ, ರಾಜ್ಯಪಾಲರ ವಿಶೇಷ ಪ್ರಶಸ್ತಿ, ಉಡುಪಿ ಮಠದ ಶ್ರೀಕೃಷ್ಣ ಪ್ರಶಸ್ತಿ, ಕನಕ ಪ್ರಶಸ್ತಿ, ಹೊರನಾಡು ಅನ್ನಪೂರ್ಣೇಶ್ವರಿ ದೇವಸ್ಥಾನದ ಶ್ರೀಮಾತಾ ಪ್ರಶಸ್ತಿ ಮುಂತಾದ ಪ್ರಶಸ್ತಿಗಳು ಅವರಿಗೆ ಲಭಿಸಿವೆ. ಚಿತ್ರದುರ್ಗ, ಇಳಕಲ್, ಗದಗ, ನಾಗನೂರ-ಬೆಳಗಾವಿ ಮಠಗಳು ಅವರನ್ನು ಪುರಸ್ಕರಿಸಿವೆ. ಬಾಲ ವೇಶ್ಯಾವೃತ್ತಿಯ ತಡೆಗೆ ಸಂಬಂಧಿಸಿದ ಕೇಂದ್ರ ಸರ್ಕಾರದ ಸಲಹಾ ಸಮಿತಿಗೆ ಬಿ.ಎಲ್. ಪಾಟೀಲರು ೧೯೯೪ರಿಂದ ಸದಸ್ಯರಾಗಿದ್ದಾರೆ. ಕಪಾರ್ಟ್ ರಾಷ್ಟ್ರೀಯ ಮಂಡಳಿ ಸದಸ್ಯರಾಗಿದ್ದಾರೆ.

ವಿಮೋಚನಾ ಸಂಘಕ್ಕೆ ೧೯೯೧ರಲ್ಲಿ ಕರ್ನಾಟಕ ರಾಜ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮಕ್ಕಳ ಕ್ಷೇಮಾಭಿವೃದ್ಧಿ ಪ್ರಶಸ್ತಿ ಲಭಿಸಿದೆ. ೧೯೯೭ರಲ್ಲಿ ಕೇಂದ್ರ ಸರ್ಕಾರದಿಂದ ರಾಷ್ಟ್ರೀಯ ಮಹಿಳಾ ಮತ್ತು ಮಕ್ಕಳ ಕ್ಷೇಮಾಭಿವೃದ್ಧಿ ಪ್ರಶಸ್ತಿ ದೊರೆತಿದೆ. ೧೯೯೮ರಲ್ಲಿ ಸಂದೇಶ ಪ್ರತಿಷ್ಠಾನ ಪ್ರಶಸ್ತಿಯನ್ನು ನೀಡಲಾಗಿದೆ. ೨೦೦೧ ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪ್ರದಾನ ಮಾಡಲಾಗಿದೆ. ೨೦೦೭ರಲ್ಲಿ ರಾಣಿ ಕಿತ್ತೂರ ಚೆನ್ನಮ್ಮ ಪ್ರಶಸ್ತಿ ಬಂದಿದೆ. ವಿಮೋಚನಾ ಪ್ರಕಾಶನದ ಅನೇಕ ಗ್ರಂಥಗಳಿಗೆ ಕನ್ನಡ ಸಾಹಿತ್ಯ ಅಕಾಡೆಮಿ ಮೊದಲು ಮಾಡಿ ವಿವಿಧ ಸಾಹಿತ್ಯ ಪ್ರತಿಷ್ಠಾನಗಳ ಪ್ರಶಸ್ತಿಗಳು ಲಭಿಸಿವೆ.

ಈ ಪುಸ್ತಕ ಪ್ರಕಟಣೆಗೆ ಅನುಮತಿ ನೀಡಿದ ಶರಣ ಸಾಹಿತಿ ರಂಜಾನ್ ದರ್ಗಾ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ.

ಡಾ. ವ್ಹಿ.ಎಸ್. ಮಾಳಿ

ನಿರ್ದೇಶಕ, ವಿಮೋಚನಾ ಪ್ರಕಾಶನ

# ನಿವೇದನೆ

ಮುಂಬರುವ ಬಸವ ಜಯಂತಿ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಆಸ್ಟ್ರೇಲೇಷ್ಯಾ (ಆಸ್ಟ್ರೇಲಿಯಾ, ನ್ಯೂಜಿಲೆಂಡ್ ಮತ್ತು ಸಿಂಗಾಪುರ ದೇಶಗಳ) ಬಸವ ಸಮಿತಿಯವರು ಶ್ರೀ ಬಿ.ಎಲ್. ಪಾಟೀಲ, ಅಧ್ಯಕ್ಷರು, ವಿಮೋಚನಾ (ದೇವದಾಸಿ ಪುನರ್ವಸತಿ) ಸಂಘ ಅಥಣಿ, ಅವರನ್ನು ಆಹ್ವಾನಿಸಿದ್ದು ಅವರು ಮೋಟಗಿ ಮಠದ ಶ್ರೀಗಳಾದ ಪ್ರಭುಚನ್ನಬಸವ ಸ್ವಾಮೀಜಿ ಜೊತೆ ಏಪ್ರಿಲ್ ತಿಂಗಳಲ್ಲಿ ಮೂರೂ ದೇಶಗಳ ಭೇಟಿಗಾಗಿ ತೆರಳಲಿದ್ದಾರೆ. ಈ ಹಿನ್ನೆಲೆಯಲ್ಲಿ ನನ್ನ ವಿವಿಧ ಪುಸ್ತಕಗಳಿಂದ ಆಯ್ಕೆ ಮಾಡಿದ ಲೇಖನಗಳ ಸಂಗ್ರಹವಾದ 'ಬಸವಧರ್ಮ ದರ್ಶನ' ಪುಸ್ತಕವನ್ನು ಸಿದ್ಧಪಡಿಸಿರುವೆ. ಹೊರದೇಶಗಳಲ್ಲಿನ ಕನ್ನಡಿಗರು ಬಸವಧರ್ಮದ ಬಗ್ಗೆ ತಿಳಿದುಕೊಳ್ಳಲು ಸಹಾಯಕ ವಾಗುವ ರೀತಿಯಲ್ಲಿ ಇಲ್ಲಿನ ಲೇಖನಗಳನ್ನು ಆಯ್ಕೆ ಮಾಡಲಾಗಿದೆ.

ದೇವದಾಸಿ ಹಣೆಪಟ್ಟಿಯೊಂದಿಗೆ ವೇಶ್ಯಾವಾಟಿಕೆಯಲ್ಲಿ ಜೀವಸವೆಸುವ ನತದೃಷ್ಟೆಯರ ಪುನರ್ವಸತಿ ಮತ್ತು ಅವರ ಮಕ್ಕಳ ಘನತೆಯ ಬದುಕಿಗಾಗಿ ಶ್ರಮಿಸುತ್ತಿರುವ ವಿಮೋಚನಾ ಸಂಸ್ಥೆಯಿಂದ 'ಬಸವಧರ್ಮ ದರ್ಶನ' ಪುಸ್ತಕ ಪ್ರಕಟವಾಗುತ್ತಿರುವುದು ಸಂತಸದ ವಿಚಾರವಾಗಿದೆ. ಬಸವಣ್ಣನವರು ತುಳಿತಕ್ಕೊಳಗಾದವರ ವಿಮೋಚನೆಗಾಗಿ ವಿಶ್ವದಲ್ಲೇ ಪ್ರಥಮ ಹೋರಾಟ ಮಾಡಿದ ವೀರಪುರುಷರು. ಅವರ ವಿಮೋಚನಾ ಹೋರಾಟದಲ್ಲಿ ವೇಶ್ಯೆಯರಿಗೂ ದಾಸಿಯರಿಗೂ ಅನೈತಿಕ ಸಂಬಂಧದಿಂದ ಜನಿಸಿದ ಅನಾಥ ಮಕ್ಕಳಿಗೂ ಭಾಗಿಯಾಗುವ ಅವಕಾಶವಿತ್ತು.

"ಆನು ಸೂಳೆ, ನಮ್ಮಕ್ಕ ಸೂಳೆ" ಎಂದು ಹೇಳುವ ಮೂಲಕ ಸಮಾಜದಲ್ಲಿ ರಸಾತಳಕ್ಕೆ ಇಳಿದಿರುವ ಜೀವಗಳ ಜೊತೆ ಬಸವಣ್ಣನವರು ಒಂದಾಗುತ್ತಾರೆ. ಅದೇ ರೀತಿ "ಚೆನ್ನಯ್ಯನ ಮನೆಯ ದಾಸಿಯ ಮಗನು, ಕಕ್ಕಯ್ಯನ ಮನೆಯ ದಾಸಿಯ ಮಗಳು, ಇವರಿಬ್ಬರು ಹೊಲದಲು ಬೆರಣಿಗೆ ಹೋಗಿ ಸಂಗವ ಮಾಡಿದರು. ಇವರಿಬ್ಬರಿಗೆ

ಹುಟ್ಟಿದ ಮಗ ನಾನು, ಕೂಡಲಸಂಗಮದೇವ ಸಾಕ್ಷಿಯಾಗಿ" ಎಂದು ಸಮಾಜದ ಕಟ್ಟಕಡೆಯ ಹೆಣ್ಣು ಗಂಡುಗಳ ಅನೈತಿಕ ಸಂಬಂಧದಿಂದ ಹುಟ್ಟಿದ ಮಕ್ಕಳ ಪರವಾಗಿ ನಿಲ್ಲುತ್ತಾರೆ. ತಮ್ಮನ್ನು ಅವರ ಸ್ಥಾನದಲ್ಲಿರಿಸಿ ಅವರಿಗೆ ನ್ಯಾಯ ಒದಗಿಸುತ್ತಾರೆ. ಇದುವೆ ಸಮಾಜದಲ್ಲಿ ಇಷ್ಟಲಿಂಗ ಮಾಡಿದ ಕ್ರಾಂತಿ! "ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ, ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೆ ಯೋಗ್ಯ" ಎಂದು ತಿಳಿಸಿದ ಬಸವಣ್ಣನವರು ಮಾನವಹಕ್ಕುಗಳ ಜನಕರಾಗಿದ್ದಾರೆ.

ಬಸವಣ್ಣನವರ ಕಾಲದಲ್ಲಿ ವಚನಕಾರ್ತಿ ಸೂಳೆ ಸಂಕವ್ವೆಯಂಥ ಅನೇಕ ಪಣ್ಯಾಂಗನೆ (ವೇಶ್ಯೆ)ಯರು ಇಷ್ಟಲಿಂಗದೀಕ್ಷೆ ಪಡೆದು ಪುಣ್ಯಾಂಗನೆಯರಾದರು. ಮೈಕೂಲಿ ಬಿಟ್ಟು ಕೈಕೂಲಿಯಿಂದ ಬದುಕುತ್ತ ಆದರ್ಶ ಶರಣೆಯರಾದರು. ದಾಸಿಯರು ಮತ್ತು ವೇಶ್ಯೆಯರಿಗೆ ಹುಟ್ಟಿದ ಮಕ್ಕಳು ಅನೈತಿಕವಾಗಿ ಜನಿಸಿದ ಮಕ್ಕಳಾಗಿ ಉಳಿಯದೆ ಇಷ್ಟಲಿಂಗ ದೀಕ್ಷೆ ಪಡೆದು ಶರಣಸಂಕುಲದಲ್ಲಿ ಶಿವಸ್ವರೂಪಿಗಳಾಗಿ ಘನತೆಯೊಂದಿಗೆ ಬದುಕಿದರು. ಇಂಥ ಪರಿವರ್ತನೆಯ ಕನಸಿನೊಂದಿಗೆ ಬಿ.ಎಲ್. ಪಾಟೀಲರು ದೇವದಾಸಿಯರ ಪುನರ್ವಸತಿಗಾಗಿ ವಿಮೋಚನಾ ಸಂಸ್ಥೆ ಆರಂಭಿಸಿ ಅವರ ಮಕ್ಕಳ ಭವಿಷ್ಯ ರೂಪಿಸುವಲ್ಲಿ ಸಫಲರಾಗಿದ್ದಾರೆ.

ವಿಮೋಚನಾ ಸಂಘದ ಪ್ರಕಾಶನದ ಮೂಲಕ ಈ ಪುಸ್ತಕವನ್ನು ಪ್ರಕಟಿಸುತ್ತಿರುವ ಡಾ. ವ್ಹಿ.ಎಸ್. ಮಾಳಿ ಅವರಿಗೆ, ಪುಸ್ತಕ ವಿನ್ಯಾಸ ಮಾಡಿದ ಸತ್ಯಕುಮಾರಿ ಅವರಿಗೆ ಹಾಗೂ ಅಂದವಾಗಿ ಮುದ್ರಿಸಿದ ಸ್ವಾಬ್ಯನ ಪ್ರಿಂಟರ್ಸ್ ಮಿತ್ರರಿಗೆ ಕೃತಜ್ಞತೆಗಳು ಸಲ್ಲುತ್ತವೆ.

ಧಾರವಾಡ ರಂಜಾನ್ ದರ್ಗಾ
೧೧.೦೩.೨೦೧೫

*It has not been possible for me to practice all the precepts of Basaveshwara which he taught 800 years ago, and which he also practiced. I have adopted a few of them. I am yet a seeker in this aspect and not an accomplished one. Eradication of untouchability and dignity of labour were among his core precepts. One does not find even shades of castism in him. Had he lived during our times, he would have been a saint worthy of worship. If you his followers practice his precepts, you could uplift not just Bharat but the world.*

***-Mahatma Gandhi***

# ಪರಿವಿಡಿ

# ಬಸವಧರ್ಮ

"ನೋಟದ ಭಕ್ತಿ ಬಸವಣ್ಣನಿಂದಾಯಿತ್ತು,
ಕೂಟದ ಜ್ಞಾನ ಬಸವಣ್ಣನಿಂದಾಯಿತ್ತು ಕಾಣಾ.
ಎಲ್ಲಿಯ ಶಿವಜ್ಞಾನ ಎಲ್ಲಿಯ ಮಾಟ ಕೂಟ ಬಸವನಲ್ಲದೆ
ಮಹಾಜ್ಞಾನ ಮಹಾಪ್ರಕಾಶ ಬಸವಣ್ಣನ ಧರ್ಮವಯ್ಯಾ
ಕಪಿಲಸಿದ್ಧಮಲ್ಲಿನಾಥಯ್ಯಾ.

ಎಂದು ಶಿವಶರಣ ಸಿದ್ಧರಾಮ ಮನದುಂಬಿ ಹೇಳಿದ್ದಾರೆ. ವಚನಕಾರರು ಬಸವಣ್ಣನವರ ಮಾರ್ಗದರ್ಶನದಲ್ಲಿ ಹೊಸ ಸಮಾಜವೊಂದರ ಹರಿಕಾರರಾದರು. ಈ ಹೊಸ ಸಮಾಜಕ್ಕೆ ಅವಶ್ಯವಿದ್ದ ವೈಚಾರಿಕತೆ, ಆತ್ಮ ಶೋಧನೆ, ಸಾಮಾಜಿಕ ವ್ಯಕ್ತಿತ್ವ, ನೈತಿಕಮೌಲ್ಯ, ಆರ್ಥಿಕ ವ್ಯವಸ್ಥೆ, ಮಾನವ ಸಂಪನ್ಮೂಲಗಳ ಸದ್ಬಳಕೆ, ಸಾಮಾಜಿಕ ಜವಾಬ್ದಾರಿ ಮತ್ತು ಸರಳ, ಸಹಜ ಹಾಗೂ ಸುಂದರವಾದ ಬದುಕಿಗೆ ಕಂಟಕಪ್ರಾಯವಾದ ಹಳೆಯ ಮೌಲ್ಯಗಳ ಟೊಳ್ಳುತನವನ್ನು ಎತ್ತಿತೋರಿಸುವುದು, ಹಳೆಯ ದೇವರುಗಳನ್ನು ತಿರಸ್ಕರಿಸಿ ಹೊಸ ದೇವರನ್ನು ಸೃಷ್ಟಿಸುವುದರ ಮೂಲಕ, ಅಂದರೆ ಲೋಕದ ಜೀವಿಳಿಗೆಲ್ಲ ಇರುವ ಒಬ್ಬನೇ ದೇವನ ಕಲ್ಪನೆಯನ್ನು ಮೂಡಿಸುವುದರ ಮೂಲಕ ಮಾನವನನ್ನು ಎಲ್ಲ ರೀತಿಯ ಜಾತಿ, ಕುಲ ಮತ್ತು ಧಾರ್ಮಿಕ ಬಂಧನಗಳಿಂದ ಮುಕ್ತಗೊಳಿಸಿ ಸರ್ವ ಸಮಾನತೆಯನ್ನೇ ಮೈದಾಳಿದಂಥ ಹೊಸ ಮಾನವನನ್ನು ಸೃಷ್ಟಿಸುವುದು ೧೨ನೇ ಶತಮಾನದ ಶರಣರ ಪರಮಗುರಿಯಾಗಿತ್ತು. ಜನರ ಭಾಷೆಯನ್ನು ಧರ್ಮ ಭಾಷೆಯಾಗಿಸಿ, ಬಸವಣ್ಣನವರ ಉದಾತ್ತ ಚಿಂತನೆಗಳನ್ನು ಧರ್ಮವಾಗಿಸಿ ಶರಣರು ಹೊಸ ಮಾನವೀಯ ವ್ಯವಸ್ಥೆಯನ್ನು ಸೃಷ್ಟಿಸಿ ಲೋಕಕ್ಕೇ ಆದರ್ಶಪ್ರಾಯವಾದರು.

ಈ ಗುರಿ ಸಾಧನೆಗಾಗಿ ಶರಣರು ವಚನ ಚಳವಳಿ ಆರಂಭಿಸಿದರು. ೧೨ನೆಯ ಶತಮಾನದಲ್ಲಿ ವಿಶ್ವದ ಯಾವುದೇ ಮೂಲೆಯಲ್ಲಿ ಕಂಡುಬರದ ಈ ಚಳವಳಿ ಕನ್ನಡದ ನೆಲದಲ್ಲಿ ರೂಪುತಾಳಿದ್ದು ಕನ್ನಡಿಗರ ಸುದೈವವಾಗಿದೆ.

"ಎನ್ನ ತನು-ಮನ-ಪ್ರಾಣಂಗಳು
ಶುದ್ಧವಾದವು ಬಸವಣ್ಣಾ ನಿಮ್ಮ ಧರ್ಮದಿಂದ.
ಇಂತಿವೆಲ್ಲವೂ ಶುದ್ಧವಾದವು ಕಲಿದೇವಾ
ನಿಮ್ಮ ಶರಣ ಸಂಗನಬಸವಣ್ಣನ ಧರ್ಮದಿಂದ."

ಎಂದು ಶರಣ ಮಡಿವಾಳ ಮಾಚಿದೇವರು ಬಸವಧರ್ಮದ ಪರಿಶುದ್ಧತೆಯನ್ನು ಸಾರಿದರು. ಶರಣರ ಕಾಯಕ ಮಡಿವಾಳರ ಕಾಯಕ ಎಂದು ಬಸವಣ್ಣನವರು ಹೇಳ್ಳಿದಾರೆ. ಜಗತ್ತನ್ನು ಶುದ್ಧಗೊಳಿಸುವುದೇ ಬಸವಧರ್ಮದ ಮೂಲ ಗುರಿಯಾಗಿದೆ. ಬಸವ ತತ್ತ್ವದ ಪ್ರಕಾರ ಜಗತ್ತು ಶುದ್ಧಗೊಂಡಾಗ ಎಲ್ಲ ಜೀವಗಳು ಎಲ್ಲರೊಡನೆ ಒಂದಾಗಿ ಜವಾಬ್ದಾರಿಯುತವಾದ ಸ್ವತಂತ್ರ ಬದುಕಿನ ಆನಂದವನ್ನು ಅನುಭವಿಸುತ್ತವೆ.

೧೨ನೇ ಶತಮಾನದ ಸಮಾಜ ಎಲ್ಲ ರೀತಿಯ ಸಮಸ್ಯೆಗಳಿಂದ ನರಳುತ್ತಿತ್ತು. ಅನ್ನದ ಋಣವು 'ಜೋಳವಾಳಿ' ಎಂಬ ಬಹುದೊಡ್ಡ ಮೌಲ್ಯವಾಗಿತ್ತು. ಸಮಾಜದಲ್ಲಿ ಬಹುಜನರಾಗಿದ್ದ ಅಸ್ಪೃಶ್ಯರು, ವಿವಿಧ ಕಾಯಕ ಮಾಡುವ ಹಿಂದುಳಿದವರು ಮತ್ತು ರೈತಾಪಿ ಜನ ಬದುಕಿಗೆ ಬೇಕಾದ ಎಲ್ಲವನ್ನು ಉತ್ಪಾದಿಸುತ್ತ ಕಷ್ಟಕರವಾದ ಜೀವನವನ್ನು ಸಾಗಿಸುತಿದ್ದರೂ ರಾಜರ, ಪಂಡಿತರ, ಪಾಳೆಯಗಾರರ, ಜಮೀನುದಾರರ ಮತ್ತು ಬಡ್ಡಿವ್ಯಾಪಾರಿಗಳ ಋಣದಲ್ಲಿ ಬದುಕುವಂಥ ಪರಿಸ್ಥಿತಿ ಇತ್ತು. ಜನರ ಬದುಕನ್ನು ಸದಾ ಹೀನಾಯವಾಗಿಸುವಂಥ ಕರ್ಮಸಿದ್ಧಾಂತ ಮತ್ತು ಮೂಢನಂಬಿಕೆಗಳು ಜನಜೀವನವನ್ನು ಅಧೋಗತಿಗೆ ಒಯ್ದಿದ್ದವು. ಧರ್ಮಗಳು ನಿಜಾಚರಣೆಯನ್ನು ಮರೆತದ್ದ ರಿಂದ ಧರ್ಮದ ಹೆಸರಿನಲ್ಲಿ ಹಿಂಸೆ, ಬಲಿ, ನರಬಲಿ, ಸುಲಿಗೆ, ಮೋಸ, ಕಂದಾಚಾರಗಳು ಸಮಾಜದಲ್ಲಿ ತಲೆ ಎತ್ತಿದ್ದವು. ಯುದ್ಧ, ಶೀತಲ ಯುದ್ಧ, ಅಧಿಕಾರ ದಾಹ ಮತ್ತು ಅಪನಂಬಿಕೆಗಳಿಂದ ರಾಜ್ಯವ್ಯವಸ್ಥೆ ಹದಗೆಟ್ಟಿತ್ತು. ಹೀಗೆ ಧರ್ಮ, ರಾಜ್ಯ ಮತ್ತು ಸಮಾಜ ಅಧೋಗತಿಗೆ ಇಳಿದ್ದಿದವು. ಇಂಥ ಸ್ಥಿತಿಯಲ್ಲಿ ಬಸವಣ್ಣನವರು ಹೊಸ ಭರವಸೆಯಾಗಿ ಮೂಡಿಬಂದರು. ಬಸವಣ್ಣನವರು ಬ್ರಾಹ್ಮಣ ವರ್ಣದಲ್ಲಿ ಜನಿಸಿ ಜಡ ಅಗ್ರಹಾರಗಳ ನಿಷ್ಕರುಣಿ ಅಂತರಂಗವನ್ನು ಅರಿತರು ಮತ್ತು ಸಕಲ ವೇದ ಶಾಸ್ತ್ರ ಪುರಾಣಗಳ ಅಧ್ಯಯನ ಮಾಡಿ ಮೂಢ ಧರ್ಮಗಳ ಟೊಳ್ಳುತನವನ್ನು ಗ್ರಹಿಸಿದರು. ಅವರು ಬಿಜ್ಜಳನ ಭಂಡಾರಿಯಾಗಿದ್ದಾಗ ಜನಸಾಮಾನ್ಯರ ಸುಲಿಗೆಯ ವಿರಾಟ್ ಸ್ವರೂಪದ

ದರ್ಶನವಾಯಿತು. ಪ್ರಧಾನಿಯಗಿ ಹೀನ ರಾಜಕೀಯ ವ್ಯವಸ್ಥೆಯ ಕ್ರೌರ್ಯವನ್ನು ಮನಗಂಡರು. ಇವೆಲ್ಲವುಗಳ ಹಿಡಿತಕ್ಕೆ ಸಿಕ್ಕಿ ನರಳುತ್ತಿರುವ ಸಮಾಜವನ್ನು ಸಂರಕ್ಷಿಸುವ ಸಂಕಲ್ಪ ಮಾಡಿದರು. ಅಂತಃಕರಣದಿಂದ ಕೂಡಿದ ಈ ಸಂಕಲ್ಪವೇ ಬಸವಧರ್ಮದ ಮೂಲ. ಈ ಮೂಲವನ್ನು ಹಿಡಿದುಕೊಂಡು ಬಸವಧರ್ಮದ ವಿಶ್ವಸಂದೇಶಗಳನ್ನು ಲೋಕದ ಜನಸಮುದಾಯಗಳಿಗೆ ತಲುಪಿಸುವ ಜವಾಬ್ದಾರಿ ಈ ನೆಲದಲ್ಲಿ ಜನಿಸಿದ ಪ್ರತಿಯೊಬ್ಬ ಪ್ರಜ್ಞಾವಂತರ ಮೇಲಿದೆ.

ವಚನಕಾರರು ಈ ಜವಾಬ್ದಾರಿಯೊಂದಿಗೆ ವಚನಗಳನ್ನು ರಚಿಸುತ್ತ ಗಣಪ್ರಜ್ಞೆಯನ್ನು ಮೂಡಿಸಿದರು. ಗಣಪ್ರಜ್ಞೆ ಎಂದರೆ ಸಮಾಜದ ಎಲ್ಲರನ್ನು ವರ್ಗ, ವರ್ಣ, ಜಾತಿ ಮತ್ತು ಲಿಂಗಭೇದಗಳಿಲ್ಲದೆ ನೋಡುವುದು. ಎಲ್ಲರ ಹಕ್ಕುಗಳು ಸಮಾನ ಎಂಬ ತತ್ತ್ವದಲ್ಲಿ ನಂಬಿಕೆ ಇಡುವುದು. ವರ್ಣ ವ್ಯವಸ್ಥೆ ಮತ್ತು ಕರ್ಮಸಿದ್ಧಾಂಥವನ್ನು ತಿರಸ್ಕರಿಸುವ ಈ ಗಣಪ್ರಜ್ಞೆ ೨೧ನೇ ಶತಮಾನಕ್ಕೆ ಹಿಂದೆಂದಿಗಿಂತಲೂ ಹೆಚ್ಚು ಅವಶ್ಯವಾಗಿದೆ. ಇದು ಪ್ರಜಾಪ್ರಭುತ್ವದ ಯುಗ. ಆದರೆ ಮಾರುಕಟ್ಟೆ ಮೌಲ್ಯಗಳೇ ಪ್ರಧಾನವಾಗುತ್ತಿರುವ ಸಮಾಜದಲ್ಲಿ ಮಾನವ ತನಗರಿಯದಂತೆಯೆ ಗುಲಾಮನಾಗುತ್ತಿದ್ದಾನೆ. ಇಂಥ ಆಧುನಿಕ ಯುಗದಲ್ಲಿ ಮಾನವೀಯ ಮೌಲ್ಯಗಳು ಕಾಲಕಸವಾಗುತ್ತಿವೆ. ಉತ್ಪಾದನಾ ವ್ಯವಸ್ಥೆ ಕಂಪ್ಯೂಟರೀಕರಣಕ್ಕೊಳಪಡುತ್ತಿರುವುದರಿಂದ ಮಾನವ ಸಂಪನ್ಮೂಲಕ್ಕೆ ಬೆಲೆಯಿಲ್ಲದಂಥ ಪರಿಸ್ಥಿತಿ ಉಂಟಾಗುತ್ತಿದೆ. ವಿವಿಧ ವಸ್ತುಗಳ ಉತ್ಪಾದನೆ ಮಾಡುವ ಕಾಯಕಜೀವಿಗಳು ತಮ್ಮ ಕಾಯಕ ಕಳೆದುಕೊಂಡು ನಿರುದ್ಯೋಗಿಯಾಗುವಂಥ ಸ್ಥಿತಿ ಎಲ್ಲೆಡೆ ತಾಂಡವವಾಡುತ್ತಿದೆ. ರೈತಾಪಿ ಜನರು ಭೂಮಿಯಲ್ಲಿ ಬೆವರು ಸುರಿಸಿದರೂ ಸಾಲದ ಶೂಲದಲ್ಲಿ ಸಿಲುಕಿ ಜೀವ ಕಳೆದುಕೊಳ್ಳುವಂಥ ಮಟ್ಟಕ್ಕೆ ಬಂದು ತಲುಪಿದ್ದಾರೆ. ನಿರುದ್ಯೋಗ, ಬಡತನ, ಅಸಹಾಯಕತೆ ಮತ್ತು ಅಪಮಾನದ ಬದುಕಿನಿಂದ ಜನ ಸಮುದಾಯವನ್ನು ಮೇಲೆತ್ತಿ ದುಡಿಮೆ ಮತ್ತು ಸ್ವಾಭಿಮಾನದ ಸಮಾಜದ ಕಡೆಗೆ ಒಯ್ಯಬೇಕಿದೆ. ಹೀಗೆ ಮಾನವನನ್ನು ಸ್ವತಂತ್ರಧೀರನನ್ನಾಗಿಸುವ ಶಕ್ತಿ ಬಸವಧರ್ಮಕ್ಕೆ ಇದೆ. ಬಸವಧರ್ಮವನ್ನು ಲೋಕದ ಜನರು ತಮ್ಮ ಧರ್ಮಗಳಿಂದ ಮತಾಂತರ ಹೊಂದದೆಯೂ ಪಾಲಿಸಲು ಸಾಧ್ಯವಾಗುವಷ್ಟು ವಿಶಾಲವಾಗಿದೆ. ಎಲ್ಲ ಮಾನವೀಯ ಧರ್ಮಗಳ ಅಂಶಗಳನ್ನು ಒಳಗೊಂಡಾಗ ಮಾತ್ರ ಒಂದು ಧರ್ಮ ವಿಶ್ವಧರ್ಮವಾಗುತ್ತದೆ. ಅಂಥ ಶಕ್ತಿ ಬಸವಧರ್ಮಕ್ಕೆ ಇದೆ. ವಿಶ್ವಧರ್ಮಗಳಾದ ಬೌದ್ಧ, ಕ್ರೈಸ್ತ, ಇಸ್ಲಾಂ ಮುಂತಾದ ಧರ್ಮಗಳ ಜೊತೆ ಸಾಗುವ ಯೋಗ್ಯತೆಯನ್ನು ಬಸವಧರ್ಮ ಹೊಂದಿದೆ. ಇಂಥ ವಿಶ್ವಧರ್ಮಗಳು ಮಾನವರ ಮಧ್ಯೆ ತಾರತಮ್ಯ ಮಾಡುವ ಸಿದ್ಧಾಂತಗಳನ್ನು

ವಿರೋಧಿಸುತ್ತವೆ. ಸುಲಿಗೆ ವ್ಯವಸ್ಥೆ, ಹಿಂಸಾತ್ಮಕ ಬದುಕು, ಭೇದಭಾವದ ಸಮಾಜ, ಅಹಂಕಾರದ ವಾತಾವರಣ ಮತ್ತು ಸ್ವಾರ್ಥಕೇಂದ್ರಿತ ಆಚರಣೆಗಳನ್ನು ಅಲ್ಲಗಳೆಯುತ್ತವೆ. ವಿಶ್ವವ್ಯಾಪಿ ನವಮಾನವನಿಗಾಗಿ ಮಾರ್ಗದರ್ಶನ ಮಾಡುತ್ತವೆ. ಸುಖ, ಸಂತೋಷ ಮತ್ತು ನೆಮ್ಮದಿ ಹೊಂದುತ್ತ ಮುಂಬರುವ ಜನಕೋಟಿಗೆ ಒಳ್ಳೆಯದಾಗುವಂಥ ವಾತಾವರಣ ನಿರ್ಮಿಸುವ ಜವಾಬ್ದಾರಿಯೊಂದಿಗೆ ಈ ಜಗತ್ತನಲ್ಲಿ ಮಾನವ ಬದುಕುವ ಬಗೆಯನ್ನು ವಿಶ್ವಧರ್ಮಗಳು ಕಲಿಸಿಕೊಡುತ್ತವೆ. ಇಂಥ ಒಂದು ವಿಶ್ವಧರ್ಮವಾದ ಬಸವಧರ್ಮ ವಿಶ್ವಸಂದೇಶಗಳ ಆಗರವೇ ಆಗಿದೆ.

ಬಸವಣ್ಣನವರ ಚಿಂತನೆಗಳು ನಮ್ಮ ಅಂತಃಕರಣವನ್ನು ತಟ್ಟಬೇಕಿದೆ. ನಾವು ಜಾತಿ ಮತಗಳ ಗೊಂಡಾರಣ್ಯದಿಂದ ಹೊರಬರಬೇಕಿದೆ. ಅಸ್ಪೃಶ್ಯತೆಯನ್ನು ನಿರ್ಮೂಲ ಮಾಡಬೇಕಿದೆ. ಮೇಲು ಕೀಳುಗಳನ್ನು ಹೊಡದೊಡಿಸಬೇಕಿದೆ. ಸ್ತ್ರೀ ಪುರುಷರಲ್ಲಿ ಸಹಚರ ಭಾವ ಮೂಡಬೇಕಿದೆ. ಸಕಲಜೀವಾತ್ಮರಿಗೆ ಲೇಸನೇ ಬಯಸಬೇಕಿದೆ, ಅಂದಾಗ ಮಾತ್ರ ಈ ಭೂಮಿ ಸರ್ವರೀತಿಯಿಂದಲೂ ಬದುಕಲು ಯೋಗ್ಯವಾಗುತ್ತದೆ. ಇಲ್ಲದಿದ್ದರೆ ಅಹಂಕಾರದ ಆಧಿಪತ್ಯದಲ್ಲಿ ಇಡೀ ಜಗತ್ತು ವಿನಾಶದೆಡೆಗೆ ಸಾಗುತ್ತ ಒಂದು ದಿನ ಬದುಕಲು ಸಾಧ್ಯವಾಗದಂಥ ಸ್ಥಿತಿ ತಲುಪುವುದರಲ್ಲಿ ಸಂಶಯವಿಲ್ಲ.

ಮಾರುಕಟ್ಟೆ ಮೌಲ್ಯಗಳ ಜಾಗತೀಕರಣದ ಈ ಸಂದರ್ಭದಲ್ಲಿ ಬಸವಣ್ಣನವರ ಮೌಲ್ಯಗಳ ಜಾಗತೀಕರಣ ಮಾಡಬೇಕಿದೆ. ಈ ಕಾಲಘಟ್ಟದಲ್ಲಿ ಗ್ರಾಹಕನಾಗುತ್ತಿರುವ ಮಾನವನನ್ನು ರಕ್ಷಿಸಿ ನಿಜಮಾನವನನ್ನಾಗಿ ಮಾಡಬೇಕಿದೆ. ವಸ್ತುಗಳ ಬೆಲೆ ಹೆಚ್ಚಿದಂತೆಲ್ಲ ಮಾನವ ಬೆಲೆ ಕಳೆದುಕೊಳ್ಳುತ್ತಿದ್ದಾನೆ. ಹಣ ಮಾತನಾಡುವಾಗ ಮಾನವ ಮೌನವಾಗುತ್ತಾನೆ. ದಶಾವತಾರಗಳ ನಂತರ ಹಣವು ಹನ್ನೊಂದನೆಯ ಅವತಾರವಾಗಿ ರೂಪುಗೊಳ್ಳುತ್ತಿದೆ. ಇಂದು ಎಲ್ಲರೂ ಹಣದ ಆರಾಧಕರೇ ಆಗುತ್ತಿದ್ದಾರೆ. ಇಂಥ ಸಂದರ್ಭದಲ್ಲಿ ಬಸವಧರ್ಮವು ನಿಜ ದೇವರ ದರ್ಶನ ಮಾಡಿಸುತ್ತದೆ. ಬಸವಣ್ಣನವರ ದೇವರು ವಿಶ್ವವ್ಯಾಪಿಯಾಗ್ದಿದಾನೆ. ಹೀಗಾಗಿ ಎಲ್ಲ ಜನಾಂಗಗಳ ದೇವರಾಗಿದ್ದಾನೆ. ಆತ ನಿರಾಕಾರನಾಗಿದ್ದಾನೆ. ಅನಂತವಾಗಿದ್ದಾನೆ, ಅನನ್ಯನಾಗಿದ್ದಾನೆ. ಏಕಮೇವಾದ್ವಿತೀಯನಾಗಿದ್ದಾನೆ. ಆತನನ್ನು ಅಂತಃಕರಣದಿಂದ ಮಾತ್ರ ಅನುಭಾವಿಸಲು ಸಾಧ್ಯ. ಜಗತ್ತೆಲ್ಲ ಒಂದು, ಜೀವಜಾಲವೆಲ್ಲ ದೇವರ ಅಂಶ ಎಂಬುದನ್ನು ಅರಿಯಲು ಸಾಧ್ಯ. ಹೀಗೆ ನಾವು ಪವಿತ್ರರಾಗಬೇಕಿದೆ, ವಿಶ್ವಮಾನವರಾಗಬೇಕಿದೆ. ಮಾನವನನ್ನು ವಿಶ್ವಮಾನವನನ್ನಾಗಿಸುವುದೇ ವಿಶ್ವಧರ್ಮಗಳ ಉದ್ದೇಶವಾಗಿದೆ. ಬಸವಧರ್ಮ ಇದೇ ಉದ್ದೇಶವನ್ನು ಹೊಂದಿದ ವಿಶ್ವಧರ್ಮವಾಗಿದೆ.

'ಕರುಣಿ ಬಸವಾ, ಕಾಲಹರ ಬಸವಾ, ಕರ್ಮಹರ ಬಸವಾ,
ನಿರ್ಮಳ ಬಸವಾ ಶಿವಜ್ಞಾನಿ ಬಸವಾ,
ನಿಮ್ಮ ಧರ್ಮವಯ್ಯಾ ಈ ಭಕ್ತಿಯ ಪದವು.
ಕರುಣಿ ಕಪಿಲಸಿದ್ಧಮಲ್ಲಿನಾಥಯ್ಯಾ
ನಿಮಗೂ ಎನಗೂ ಬಸವಣ್ಣನ ಧರ್ಮವಯ್ಯಾ.'

ಎಂದು ಸಿದ್ಧರಾಮರು ಹೇಳಬೇಕಾದರೆ ಬಸವಣ್ಣನವರ ವ್ಯಕ್ತಿತ್ವ ಎಂಥದು ಎಂಬುದರ ಅರಿವಾಗುವುದು. ಅವರ ಧರ್ಮ ಅವರ ಅಂತಃಕರಣವೇ ಆಗಿದೆ. ಅವರ ಅಂತಃಕರಣವು ಮಂಗಳಕರವಾದ ಪರಮಾತ್ಮನಷ್ಟೇ ವಿಶಾಲವಾಗಿದೆ. ವಿಶ್ವಧರ್ಮವಾಗಿ ಮಾನವತೆಯನ್ನು ಸಾರುತ್ತ ನಿಂತಿದೆ.

ಬಸವಣ್ಣನವರ ದೇವರು ನಿರಾಕಾರನಾಗಿದ್ದಾನೆ. ಸ್ಥಾವರ ದೇವರ ಜಾಗದಲ್ಲಿ ಬಸವಣ್ಣನವರು ನಿರಾಕಾರ ದೇವರನ್ನು ತಂದಿರಿಸಿದ್ದು ಭಾರತದ ಧಾರ್ಮಿಕ ಇತಿಹಾಸದಲ್ಲಿ ಅನುಪಮ ಸಾಧನೆಯಾಗಿದೆ.

"ತೋರಲಿಲ್ಲದ ಸಿಂಹಾಸನದ ಮೇಲೆ
ಹೇಳಬಾರದ ಘನವು ಬಂದೆರಗಿದಡೆ,
ತೋರಿ ಮೆರೆವ ಸಂಗಮನಾಥನು ಎದ್ದು ಹೋದನು."

ಎಂದು ಬಸವಣ್ಣನವರು ಹೇಳುತ್ತಾರೆ. ಬಸವಣ್ಣನವರ ನಿರಾಕಾರ ದೇವರು ವಿಶ್ವದ ದೇವರಾಗಿದ್ದಾನೆ. ಬಸವಣ್ಣನವರ ಧರ್ಮ ವಿಶ್ವಧರ್ಮವಾಗಿದೆ. ಬಸವಣ್ಣನವರ ಸಂದೇಶಗಳು ವಿಶ್ವಸಂದೇಶಗಳಾಗಿವೆ.

●

# ಬಸವದರ್ಶನ

ಬಾಳತ್ವಕ್ಕೆಂದು ಮಧುವ ತಂದು
ಕೊಡನ ತುಂಬಿದ ಜೇನುಹುಳುವಿನಂತೆ ತಾನುಂಬುದು;
ತನ್ನೆಂಜಲ ಜಗವುಂಬುದು ನೋಡಯ್ಯಾ
ಶಿವಭಕ್ತನಾಗಿ ಶಿವಾನ್ನವನೇ ಕೊಂಡು,
ಒಕ್ಕಮಿಕ್ಕ ವಸ್ತುವ ಜಂಗಮಕ್ಕಿಕ್ಕುವಾತನೆ ಭಕ್ತ,
ಕೊಂಡಾತನೆ ಜಂಗಮ.
ನಡುವೆ ನೀ ಬಂದು ಭಂಡು ಮಾಡದಿರ್ರೈ
ಕೂಡಲಸಂಗಮದೇವಾ.

ಜೀವನ ಮತ್ತು ಬಾಳುವೆಯ ಮಧ್ಯದ ಸೂಕ್ಷ್ಮತೆಯನ್ನು ಅರಿತುಕೊಳ್ಳುವವರೆಗೂ ಮಾನವನ ಬದುಕು ದುಃಖದಿಂದ ತುಂಬಿರುತ್ತದೆ. ಜೀವನವು ವೈಯಕ್ತಿಕವಾದ ಐಹಿಕ ಆಸೆಗಳ ಮೇಲೆ ನಿಂತಿದ್ದರೆ ಬಾಳುವೆಯು ಸಾಮೂಹಿಕ ಹೊಣೆಗಾರಿಕೆಯ ಮೇಲೆ ನಿಂತಿರುತ್ತದೆ. ಜನರು ಸಾಮಾಜಿಕ ಹೊಣೆಗಾರಿಕೆಯನ್ನು ನಿಭಾಯಿಸುವುದರ ಮೂಲಕ ತಮ್ಮ ಜೀವನವನ್ನು ಸಾರ್ಥಕಗೊಳಿಸುವಂತೆ ಮಾಡುವುದೇ ಬಸವಧರ್ಮದ ಗುರಿಯಾಗಿದೆ. ಇಷ್ಟಲಿಂಗದ ಮೂಲಕ ವೈಯಕ್ತಿಕ ಸ್ವಾತಂತ್ರ್ಯ, ಜಂಗಮಲಿಂಗದ ಮೂಲಕ ಲೋಕಪ್ರಜ್ಞೆ, ಕಾಯಕದ ಮೂಲಕ ಸ್ವಾವಲಂಬನೆ, ದಾಸೋಹದ ಮೂಲಕ ಸಾಮಾಜಿಕ ಜವಾಬ್ದಾರಿ ಬಸವಧರ್ಮದ ಆಧಾರಸ್ತಂಭಗಳಾಗಿವೆ. ದಯಾವಂತರಾಗಿ, ಅರಿವೆಂಬ ಗುರುವಿನಿಂದ ಇವನ್ನೆಲ್ಲ ಅರ್ಥಮಾಡಿಕೊಳ್ಳಬೇಕು. ಈ ಅರಿವು ವ್ಯಕ್ತಿಗತ ಮತ್ತು ಸಾಮೂಹಿಕ ಅನುಭವ ಹಾಗೂ ಗುರುಸ್ವರೂಪಿ ಜ್ಞಾನಿಗಳ ಮೂಲಕ ಬರುವುದು.

ಹೀಗೆ ಬಸವಣ್ಣನವರು ಲೋಕದ ಗುರುವಾಗಿದ್ದಾರೆ. ಈ ವಚನದಲ್ಲಿ ಬಸವಧರ್ಮದ ತತ್ತ್ವಗಳು ಅಡಗಿವೆ.

ಜೇನುಹುಳುಗಳ ಜೀವನಶೈಲಿಯ ಮೂಲಕ ಬಸವಣ್ಣನವರು ನಮಗಿಲ್ಲಿ ಬದುಕಿನ ಪಾಠವನ್ನು ಹೇಳಿಕೊಟ್ಟಿದ್ದಾರೆ. ಜೇನುಗಳಿಂದ ನಾವು ಕಲಿಯಬೇಕಾದುದು ಬಹಳಷ್ಟಿದೆ ಎಂದು ಬಸವಣ್ಣನವರು ಈ ವಚನದಲ್ಲಿ ಸೂಚಿಸಿದ್ದಾರೆ. ಸಮೂಹ ಜೀವನ, ಕಾಯಕ ಜೀವಿಗಳಾಗಿರುವುದು, ಕಾಯಕದ ಘನತೆ, ಸಾಮೂಹಿಕ ಸಂಗ್ರಹ, ಹಂಚಿಕೊಂಡು ತಿನ್ನುವ ದಾಸೋಹ, ಸಹಕಾರ, ಶ್ರಮ ವಿಭಜನೆ, ಸಾಮೂಹಿಕ ಹೊಣೆಗಾರಿಕೆ, ಯೋಗ್ಯ ನಾಯಕತ್ವಕ್ಕೆ ಮನ್ನಣೆ, ಸ್ವಚ್ಛತೆ, ರಕ್ಷಣೆ, ತ್ಯಾಗ ಪ್ರತ್ಯುಪಕಾರ, ಮತ್ತು ಕುಟುಂಬಯೋಜನೆ ಮುಂತಾದವು ಜೇನುಹುಳುಗಳ ಜೀವನಕ್ರಮದಲ್ಲಿ ಸೇರಿಕೊಂಡಿವೆ. ಜೇನುಹುಳುಗಳಿಂದ ಮಾನವ ಪಾಠ ಕಲಿತು ಸಾಮಾಜಿಕ ನ್ಯಾಯ, ಮಾನವಹಕ್ಕುಗಳು, ಎಲ್ಲ ಕಾಯಕಗಳನ್ನು ಸಮನಾಗಿ ಕಾಣುವ ಹೃದಯವೈಶಾಲ್ಯ, ಪರಿಸರ ರಕ್ಷಣೆ, ಏಕತೆ, ಸಾಮಾಜಿಕ ನಿಧಿ, ಪ್ರಜಾಸತ್ತಾತ್ಮಕವಾಗಿ ಕಾರ್ಯನಿರ್ವಹಣೆ, ಗಣಾಚಾರ, ಸಾಮಾಜಿಕ ಮತ್ತು ಆರ್ಥಿಕ ಭದ್ರತೆ, ಆ ಮೂಲಕ ಹೊಸ ದೇವರು ಮತ್ತು ತತ್ತ್ವದ ಮೂಲಕ ಪರ್ಯಾಯ ಸಮಾಜ ನಿರ್ಮಾಣ, ಕಾಯಕ ಮತ್ತು ದಾಸೋಹದ ಮೂಲಕ ಮಾನವಸಂಪನ್ಮೂಲದ ಸಾಮಾಜೀಕರಣ, ಸಕಲ ಜೀವಾತ್ಮರಿಗೆ ಲೇಸಾಗುವ ರೀತಿಯಲ್ಲಿ ನೈಸರ್ಗಿಕ ಸಂಪನ್ಮೂಲಗಳ ಬಳಕೆ ಮುಂತಾದವುಗಳಲ್ಲಿ ಮಾನವ ಪರಿಣತಿ ಪಡೆಯುವುದಕ್ಕಾಗಿ ಜೇನುಹುಳುವಿನ ಜೀವನಕ್ರಮವನ್ನು ಅರಿತುಕೊಳ್ಳುವುದು ಅವಶ್ಯವಾಗಿದೆ ಎಂದು ಬಸವಣ್ಣನವರು ಈ ವಚನದಲ್ಲಿ ಸೂಚಿಸಿದ್ದಾರೆ.

ಜೇನುಹುಳುಗಳು ಪರಾಗವನ್ನು ಸೇವಿಸುತ್ತವೆ ಆದರೆ ಬಾಳತ್ವಕ್ಕಾಗಿ ಅಂದರೆ ಸಾಮೂಹಿಕ ಬದುಕಿಕಾಗಿ ಮಧುಸಂಗ್ರಹ ಮಾಡುತ್ತವೆ. ದುರ್ದಿನಗಳಲ್ಲಿ ಹಂಚಿಕೊಂಡು ತಿನ್ನುತ್ತವೆ. ಎಲ್ಲ ಜೇನುಹುಳುಗಳು ರಾಣಿಜೇನಿಗೆ ನಿಷ್ಠೆಯನ್ನು ತೋರಿಸುತ್ತವೆ. ಅವು ತಮ್ಮದೇ ಆದ ಆಹಾರ ಸಂಗ್ರಹ ವ್ಯವಸ್ಥೆ ಮತ್ತು ರಕ್ಷಣಾ ವ್ಯವಸ್ಥೆಯನ್ನು ಹೊಂದಿವೆ. ಆ ಮೂಲಕ ತಮ್ಮ ಸಾಮೂಹಿಕ ಬದುಕಿಗೆ ನಿಷ್ಠವಾಗಿರುತ್ತವೆ. ಇಡೀ ಜೇನುಗೂಡು ಜಂಗಮಲಿಂಗ (ಸಮೂಹವೆಂಬ ದೇವರು) ವಾದರೆ, ಒಳಗಿರುವ ರಾಣಿಜೇನು ಇಷ್ಟಲಿಂಗದ ಹಾಗೆ. ಎಲ್ಲ ಜೇನುಹುಳುಗಳು ವಿವಿಧ ಕಾರ್ಯದಲ್ಲಿ ತೊಡಗುವ ಕಾಯಕಜೀವಿಗಳು. "ಶರಣಸತಿ ಲಿಂಗಪತಿ" ಎಂಬಂತೆ ಇವುಗಳ ಬದುಕು. ಇಲ್ಲಿ ರಾಣಿಜೇನೇ 'ಲಿಂಗಪತಿ' ಜೇನುಹುಳುಗಳೆಲ್ಲ 'ಶರಣಸತಿಯರು'. ಜೇನುಗೂಡೆಂಬ ಮಹಾಮನೆಯೊಳಗೆ ರಾಣಿಜೇನು ಎಂಬ ಮನೆಯೊಡತಿ ಇರುವುದರಿಂದ ಎಲ್ಲವೂ

ಸುಗಮವಾಗಿ ಸಾಗಿದೆ. ರಾಣಿಜೇನನ್ನು ಕಳೆದುಕೊಂಡು ಜೇನುಹುಳುಗಳು ಒಟ್ಟಾರೆ ಬದುಕಲಿಕ್ಕಾಗದು. ಮಹೋನ್ನತ ತತ್ತ್ವವಿಲ್ಲದೆ ಒಂದಾಗಿ ಬದುಕಲಿಕ್ಕಾಗದು. ರಾಣಿಜೇನು ಹೋದಕಡೆ ಜೇನುಹುಳುಗಳೆಲ್ಲ ಹೋಗುವವು. ಶರಣರು ತತ್ತ್ವವಿದ್ದಲ್ಲಿ ಮಾತ್ರ ಇರುವರು. ಆ ತತ್ತ್ವವೇ ಕೂಡಲಸಂಗಮದೇವ. ಶರಣರೆಂಬ ಜೇನುಹುಳುಗಳಿಗೆ ಕೂಡಲಸಂಗಮ ದೇವ ರಾಣಿಜೇನು ಇದ್ದಂತೆ.

ಜೇನುಹುಳುಗಳು ದೂರದೂರದ ವರೆಗೆ ಸಾಗಿ ವಿವಿಧ ಹೂಗಳ ಮಕರಂದವನ್ನು ಹೀರುತ್ತ ಅದನ್ನೆಲ್ಲ ಮಧುವಾಗಿಸಿ ಜೇನುಗೂಡಿನಲ್ಲಿ ಸಂಗ್ರಹಿಸುವವು. ಅವು ಹೂಗಳಿಂದ ಹೂಗಳಿಗೆ ಹಾರುವಾಗ ಪರಾಗಸ್ಪರ್ಶವಾಗಿ ಸಸ್ಯಲೋಕದಲ್ಲಿ ಉತ್ಪತ್ತಿ ಕ್ರಿಯೆ ನಡೆಯು ವುದು. ಹೀಗೆ ಹೂಗಳು ಜೇನುಹುಳುಗಳಿಗೆ ಮಕರಂದ ಕೊಡುವ ಮೂಲಕ ದಾಸೋಹ ಮಾಡುವವು. ಜೇನುಗಳು ಪರಾಗಸ್ಪರ್ಶ ಮಾಡುವುದರ ಮೂಲಕ ಹೂಗಳ ಕಾಯಕ ಮಾಡುವವು. ಎಲ್ಲ ಜೇನುಹುಳುಗಳು ಜೇನುಗೂಡಿನಲ್ಲಿ ಜೇನುಸಂಗ್ರಹ ಮಾಡುವುದರ ಮೂಲಕ 'ಸಾಮಾಜಿಕ ನಿಧಿ'ಯನ್ನು ಸೃಷ್ಟಿಸುವವು. ಶರಣರು ಹೀಗೆ ಸಾಮಾಜಿಕ ನಿಧಿಯನ್ನು ಸಂಗ್ರಹಿಸುವುದಕ್ಕೆ ಬಸವಣ್ಣನವರು ಶಿವನಸೊಮ್ಮು (ಶಿವನಿಧಿ) ಎಂದು ಕರೆದಿದ್ದಾರೆ. ಜೇನುಹುಳುಗಳು ರಾಣಿಜೇನನ್ನು ಮತ್ತು ಜೇನುಗೂಡನ್ನು ರಕ್ಷಿಸುತ್ತವೆ. ಆಗಂತುಕರ ವಿರುದ್ಧ ರಕ್ಷಣಾತ್ಮಕ ಹೋರಾಟ ಮಾಡುತ್ತವೆ. ಹಾಗೆ ಮಾಡುವುದರ ಮೂಲಕ ಜೀವತ್ಯಾಗ ಮಾಡುತ್ತವೆ. ಕಲ್ಯಾಣದಲ್ಲಿ ಶರಣರ ಹತ್ಯಾಕಾಂಡ ನಡೆದ ಸಂದರ್ಭದಲ್ಲಿ ಶರಣರು ಹೋರಾಟಕ್ಕೆ ಇಳಿಯುವ ಪರಿಸ್ಥಿತಿ ಉಂಟಾಯಿತು. ಇದೇ ಗಣಾಚಾರ.

ಸಕಲಜೀವಾತ್ಮರಿಗೆ ಲೇಸನೆ ಬಯಸುವ ಶರಣರು ಶಸ್ತ್ರಗಳನ್ನೇಕೆ ಹಿಡಿದರು ಎಂಬ ಪ್ರಶ್ನೆ ಅನೇಕರಿಗೆ ಕಾಡುವುದು ಸಹಜ. ಶರಣ ತತ್ತ್ವ ಹಿಂಸಾತತ್ತ್ವಕ್ಕೆ ವಿರುದ್ಧ ವಾಗಿದೆ. ಆದರೆ ಅವರು ಶಸ್ತ್ರವನ್ನು ಹಿಡಿಯುವ ಅನಿವಾರ್ಯತೆ ಉಂಟಾಯಿತೇಕೆ ಎಂಬುದನ್ನು ಅರಿತುಕೊಳ್ಳಬೇಕಿದೆ.

ಸರ್ವವೆಲ್ಲವೂ ಚಿದಾತ್ಮ ಭಾವವೊಳಗೊಂಡು ಸರ್ವಸಮತ್ವದಿಂದ ಇರುವುದೇ ಭಕ್ತಿ. ವರ್ಗ, ವರ್ಣ, ಜಾತಿ ಮತ್ತು ಲಿಂಗಭೇದವಿಲ್ಲದ ಸರ್ವಸಮತ್ವದ ಕಲ್ಯಾಣವನ್ನು ಬಸವಣ್ಣನವರು ತಮ್ಮ ಜೀವಿತಾವಧಿಯಲ್ಲೇ ಸಾಧಿಸಿತೋರಿಸಿದರು. ಆದರೆ ಬಿಜ್ಜಳನ ಶಸ್ತ್ರಪ್ರಭುತ್ವ ಮತ್ತು ಸರ್ವಸಮತ್ವವನ್ನು ಒಪ್ಪದ ಶಾಸ್ತ್ರಪ್ರಭುತ್ವ ಸೇರಿ ಬಸವಣ್ಣನವರ ಕಲ್ಯಾಣವನ್ನು ಹಾಳುಮಾಡಿದವು. 'ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು ನೋಡಾ' ಎಂದು ಬಸವಣ್ಣನವರು ವಿಷಾದ ವ್ಯಕ್ತಪಡಿಸಿದ್ದಾರೆ.

ಕೆಳಜಾತಿಯಿಂದ ಬಂದ ಮಹಾಜ್ಞಾನಿ ಅಲ್ಲಮಪ್ರಭುಗಳನ್ನು ಬಸವಣ್ಣನವರು ಶೂನ್ಯಸಿಂಹಾಸನಾಧೀಶ್ವರರನ್ನಾಗಿಸಿ ಸರ್ವಸಮಾನತೆಯ ನಾಂದಿಹಾಡಿದರು. ಶೂನ್ಯ ಸಿಂಹಾಸನದ ಮುಂದೆ ರಾಜ ಸಿಂಹಾಸನ ಮತ್ತು ಮನುಧರ್ಮ ಸಿಂಹಾಸನಗಳು ಕಳೆಗುಂದತೊಡಗಿದವು. ಸಮಗಾರ ಹರಳಯ್ಯನವರ ಮಗನ ಮತ್ತು ಮಧುವರಸರ ಮಗಳ ಮದುವೆ ಒಂದು ನೆಪವಾಯಿತು. ಶರಣರ ಮತ್ತು ಅವರನ್ನು ನಂಬಿದ ಜನಸಮುದಾಯದ ಹತ್ಯಾಕಾಂಡ ಆರಂಭವಾಯಿತು. ವಚನಸಂಪತ್ತು ಬೆಂಕಿಗೆ ಆಹುತಿಯಾಗತೊಡಗಿತು. ಇಂಥ ಸಂದರ್ಭದಲ್ಲಿ ಶರಣರು ಶಸ್ತ್ರಗಳನ್ನು ಕೈಗೆತ್ತಿಕೊಳ್ಳು ವಂಥ ಪರಿಸ್ಥಿತಿಯನ್ನು ಪ್ರಭುತ್ವ ನಿರ್ಮಾಣ ಮಾಡಿತು. 'ಬಸವಗೂ ಎನಗೂ ಭಾವಭೇದ ವಿಲ್ಲ' ಎಂದು ಹೇಳುವ ಬಸವಣ್ಣನವರ ಸಹೋದರಿ ಅಕ್ಕ ನಾಗಮ್ಮ ಕೂಡ ವಚನ ರಕ್ಷಣೆಗಾಗಿ ಶಸ್ತ್ರಧಾರಿಯಾಗಿ ಹೋರಾಡಿದರು. ಈ ಸಂದರ್ಭದಲ್ಲಿ ಕಲ್ಯಾಣದಲ್ಲಿ ನಡೆದ ಶರಣರ ಹತ್ಯಾಕಾಂಡವನ್ನು 'ಕಲ್ಯಾಣ ಕ್ರಾಂತಿ' ಎಂದು ರಂಜಕವಾಗಿ ಹೇಳುತ್ತೇವೆ. ಪ್ರಭುತ್ವದ ಹತ್ಯಾಕಾಂಡ ಬಸವಕ್ರಾಂತಿ ಆಗುವುದಿಲ್ಲ. ಬಸವಕ್ರಾಂತಿಯು ಭೂಮಿಯ ಮೇಲೆ ಸರ್ವಸಮತ್ವವನ್ನು ಸಾಧಿಸುವುದಾಗಿದೆ. ಯಥಾಸ್ಥಿತಿವಾದಿಗಳು ಆ ಸಾಧನೆಯ ದಾರಿಗೆ ಅಡ್ಡಬಂದಾಗ ಅಮಾಯಕರ ಮತ್ತು ವಚನಗಳ ರಕ್ಷಣೆಗಾಗಿ ಶರಣರು ಶಸ್ತ್ರಗಳನ್ನು ಹಿಡಿಯುವುದು ಅನಿವಾರ್ಯವಾಯಿತು. ವ್ಯಾಘ್ರ ಬಂದಾಗ ಗೋಮಾತೆ ಕೊಂಬು ಮುಂದೆ ಮಾಡುವ ಹಾಗೆ ಶರಣರು ಕ್ರೂರ ವ್ಯವಸ್ಥೆಯ ವಿರುದ್ಧ ಶಸ್ತ್ರಗಳನ್ನು ಮುಂದೆಮಾಡಿದರು. ಈ ಜಗತ್ತಿನಲ್ಲಿ ವ್ಯಾಘ್ರನಿಗೆ ನಖಗಳಿರುವವರೆಗೂ ಗೋಮಾತೆ ಯರಿಗೆ ಕೊಂಬುಗಳಿರುತ್ತವೆ. ಪ್ರಭುತ್ವ ದಬ್ಬಾಳಿಕೆ ನಡೆಸುವವರೆಗೂ ಹೋರಾಟಗಳು ಇದ್ದೇ ಇರುತ್ತವೆ. ಪ್ರಭುತ್ವ ಹೂಗಳನ್ನು ಹೊಸಕಿ ಹಾಕಬಲ್ಲುದು; ಆದರೆ ಅದಕ್ಕೆ ವಸಂತ ಋತುವನ್ನು ತಡೆಯುವ ಶಕ್ತಿ ಇಲ್ಲ.

ರಾಣಿಜೇನಿನಿಂದ ಮಾತ್ರ ಸಂತಾನ ಅಭಿವೃದ್ಧಿಯಾಗುತ್ತದೆ. ಕೆಲವೇ ಗಂಡು ಜೇನುಗಳನ್ನುಳಿದು ಉಳಿದೆಲ್ಲವು ಹೆಣ್ಣು ಜೇನುಗಳು. ಜೇನುಗಳೆಲ್ಲ ಕಾಯಕಜೀವಿಗಳಾಗಿವೆ. ಅವು 'ನಮಗೆಲ್ಲ ಸಮಪಾಲು' ಎಂಬ ತತ್ತ್ವದ ಆಧಾರದ ಮೇಲೆಯೆ ಜೇನುಗೂಡಿನಲ್ಲಿ ಮಧುವನ್ನು ಶೇಖರಿಸುತ್ತವೆ. ಪರಮೇಶ್ವರನು 'ನಮ್ಮ ಕೂಡಲಸಂಗನ ಶರಣರ ಮನದ ಕೊನೆಯ ಮೊನೆಯ ಮೇಲಡಗಿದನು' ಎಂದು ಬಸವಣ್ಣನವರು ಹೇಳುವಂತೆ ಜೇನುಗೂಡಿನಲ್ಲಿ ರಾಣಿಜೇನು ಇರುತ್ತದೆ. ರಾಣಿಜೇನು ಇಡೀ ಜೇನುಗೂಡಿನ ವ್ಯವಸ್ಥೆಯ ಕೇಂದ್ರಬಿಂದು. ಕಾಯಕಜೀವಿಗಳಾದ ಸಹಸ್ರಾರು ಜೇನುಗಳೇ ಎಲ್ಲವನ್ನೂ ನಿಭಾಯಿಸು ತ್ತವೆ. ಆದ್ದರಿಂದ ಅಲ್ಲಿ ಪ್ರಜಾಪ್ರಭುತ್ವದ ಝೇಂಕಾರವಿರುತ್ತದೆ. ಈ ಕಾಯಕಜೀವಿ ಜೇನುಗಳ ಆಯುಷ್ಯ ಕೇವಲ ಆರೆಂಟು ವಾರಗಳಷ್ಟಿರುತ್ತದೆ. ಆದರೆ ರಾಣಿಜೇನಿನ

ಆಯುಷ್ಯ ಹತ್ತುಪಟ್ಟು ಜಾಸ್ತಿ ಇರುತ್ತದೆ. ಮಾನವರ ಬದುಕಿಗೆ ಕೂಡ ಒಂದು ಮಿತಿ ಇದೆ. ಅಷ್ಟೊರಳಗೆ ಅವರು ತಮ್ಮ ಪಾಲಿನ ಕರ್ತವ್ಯವನ್ನು ಮಾಡುತ್ತ ಇಹಲೋಕದ ಯಾತ್ರೆಯನ್ನು ಮುಗಿಸಬೇಕಾಗುತ್ತದೆ. ಅಷ್ಟರೊಳಗೆ ಕಾಯಕ ಮತ್ತು ದಾಸೋಹದ ಮೂಲಕ ತಮ್ಮ ಮಾನಸಿಕ, ದೈಹಿಕ ಮತ್ತು ಸಾಮಾಜಿಕ ವ್ಯಕ್ತಿತ್ವವನ್ನು ರೂಪಿಸಿಕೊಳ್ಳ ಬೇಕಾಗುತ್ತದೆ. ತಮ್ಮ ಮನದ ಕೊನೆಯ ಮೊನೆಯಲ್ಲಿ ದೇವರು ಅಡಗಿದ್ದಾನೆ ಎಂಬುದನ್ನು ಅನುಭಾವಿಸಬೇಕಾಗುತ್ತದೆ. ಜೇನುಗಳ ಧ್ಯಾನ ರಾಣಿಜೇನಿನ ಕಡೆಗೆ ಇರುವಂತೆ ನಮ್ಮ ಧ್ಯಾನ ನಮ್ಮೊಳಗಿನ ದೇವರ ಕಡೆ ಇರಬೇಕಾಗುತ್ತದೆ. ಜೇನುಗಳು ತಾವು ಬದುಕುತ್ತ ಒಕ್ಕಮಿಕ್ಕದ್ದನ್ನು ಜೇನುತುಪ್ಪವಾಗಿಸಿ ಸಂಗ್ರಹಿಸುತ್ತ 'ಸಾಮಾಜಿಕ ನಿಧಿ'ಯ ಹಾಗೆ ರಕ್ಷಿಸುತ್ತವೆ. 'ತನ್ನೆಂಜಲ ಜಗವುಂಬುದು ನೋಡಯ್ಯಾ' ಎಂದು ಬಸವಣ್ಣನವರು ಹೇಳುವಲ್ಲಿ, 'ಎಂಜಲು' ಶಬ್ದವನ್ನು ಗುಣಾತ್ಮಕವಾಗಿ ಬಳಸಿದ್ದಾರೆ. ಹುಟ್ಟಿನಲ್ಲಿ ಜನನ ಸೂತಕ, ಸಾವಿನಲ್ಲಿ ಪ್ರೇತಸೂತಕ, ರಜಸ್ಸಿನಲ್ಲಿ ರಜಸ್ಸೂತಕ, ಎಂಜಲಿನಲ್ಲಿ ಉಚ್ಚಿಷ್ಟಸೂತಕ ಮತ್ತು ಕುಲದಲ್ಲಿ ಜಾತಿಸೂತಕ ಎಂಬ ಐದು ಬಗೆಯ ಮೈಲಿಗೆಗಳಿವೆ ಎಂದು ವೈದಿಕರು ಭಾವಿಸಿದ್ದಾರೆ. ಬಸವಣ್ಣನವರು ಈ ಪಂಚಸೂತಕಗಳನ್ನು ತಿರಸ್ಕರಿಸಿದ್ದಾರೆ. ಕಾಯಕಜೀವಿ ಗಳಲ್ಲಿ ಸಮಾಜದಿಂದ ಬೊಟ್ಟು ಮಾಡಿಸಿಕೊಳ್ಳದೆ ಬದುಕುವುದು ಬಾಳುವೆಯಾದರೆ, ಬಾಯಿಂದ ತೆಗೆದುಕೊಡುವುದು ಆಳವಾದ ಪ್ರೀತಿಯ ದ್ಯೋತಕವಾಗಿದೆ. ಹೀಗೆ ಬಸವಣ್ಣನವರ ಪರಿಕಲ್ಪನೆಯಲ್ಲಿ 'ಎಂಜಲು' ಉನ್ನತ ಸ್ಥಾನವನ್ನು ಪಡೆಯುತ್ತದೆ.

'ಶಿವಭಕ್ತನಾಗಿ ಶಿವಾನ್ನವನೇ ಕೊಂಡು, ಒಕ್ಕಮಿಕ್ಕ ವಸ್ತುವ ಜಂಗಮಕ್ಕಿಕ್ಕುವಾತನೆ ಭಕ್ತ' ಎಂದು ಬಸವಣ್ಣನವರು ಭಕ್ತನ ಗುಣಲಕ್ಷಣಗಳನ್ನು ತಿಳಿಸುತ್ತಾರೆ. ನಾವು ದುಡಿದು ಗಳಿಸಿದ್ದನ್ನು ಶಿವನ ಪ್ರಸಾದವೆಂದು ಸದ್ಬಳಕೆ ಮಾಡಬೇಕು. ಉಳಿದದ್ದನ್ನು ಸಾಮಾಜಿಕ ನೆಮ್ಮದಿಯನ್ನು ಉಳಿಸಿ ಬೆಳೆಸುವ ಕಾರ್ಯಗಳಿಗೆ ಉಪಯೋಗಿಸುವುದಕ್ಕಾಗಿ ಇರುವ ಶಿವನಿಧಿಯನ್ನು ಹೆಚ್ಚಿಸಲು ಕೊಡಬೇಕು. ಹಾಗೆ ಕೊಡುವವನು ಭಕ್ತನಾದರೆ ಅದನ್ನು ತೆಗೆದುಕೊಳ್ಳುವವನು ಜಂಗಮನಾಗುತ್ತಾನೆ. ಭಕ್ತನಿಗೆ ಸಾಮಾಜಿಕ ಪ್ರಜ್ಞೆ ಇರುವಂತೆ ತೆಗೆದುಕೊಳ್ಳುವವನಿಗೂ ಸಾಮಾಜಿಕ ಪ್ರಜ್ಞೆ ಇರಬೇಕಾಗುತ್ತದೆ. ಜಂಗಮನಾಗುವುದೆಂದರೆ ವೈಯಕ್ತಿಕ ಬದುಕನ್ನು ಮೀರಿ ಸಾಮಾಜಿಕವಾಗಿ ಬದುಕುವುದು. ಇಡೀ ಸಮಾಜವೇ ತಾನೆಂಬ ರೀತಿಯಲ್ಲಿ ಸಂವೇದನಾಶೀಲನಾಗಿರುವುದು. ಇಂಥ ಒಂದು ಸುಂದರ ಸಮಾಜದ ಕನಸನ್ನು ಬಸವಣ್ಣನವರು ಕಂಡಿದ್ದರು. ಅದನ್ನು ಈ ಭೂಮಿಯ ಮೇಲೆ ಸಾಕಾರಗೊಳಿಸುವ ಯೋಜನೆ ರೂಪಿಸಿದರು. ಆದರೆ ಇದು ಕಾರ್ಯಗತವಾಗುವ ಹಾಗೆ ದೇವರು ಕರುಣಿಸಬೇಕೆಂಬುದು ಅವರ ಬಯಕೆಯಾಗಿತ್ತು. ಅಂತೆಯೆ 'ನಡುವೆ ನೀ ಬಂದು ಭಂಡು (ಅಪಮಾನ) ಮಾಡದಿರೈ ಕೂಡಲಸಂಗಮದೇವಾ.' ಎಂದು

ಪ್ರಾರ್ಥಿಸುತ್ತಾರೆ. ಇಂಥ ಒಂದು ವಿನೂತನವಾದ ಬೃಹತ್ ಕಾರ್ಯದಲ್ಲಿ ತಾವು ಅಪಮಾನಕ್ಕೆ ಒಳಗಾಗಬಾರದು ಎಂಬ ಎಚ್ಚರಿಕೆ ಅವರಿಗಿದೆ. ಹೀಗೆ ಈ ವಚನ ಬಸವಣ್ಣನವರ ದರ್ಶನವನ್ನು ಬಿಂಬಿಸುವ ಸಾಮರ್ಥ್ಯವನ್ನು ಹೊಂದಿದೆ.

"ಪ್ರತಿಯೊಂದು ನಿಜವಾದ ತತ್ತ್ವಜ್ಞಾನ ತನ್ನ ಕಾಲದ ಬೌದ್ಧಿಕವಾದ ಶುದ್ಧಸತ್ವವಾಗಿರುತ್ತದೆ" ಎಂದು ಕಾರ್ಲ್ ಮಾರ್ಕ್ಸ್ ಹೇಳಿದ್ದಾರೆ. ಬಸವಣ್ಣನವರು ತಮ್ಮ ಕಾಲದಲ್ಲಿ ನಡೆಯುತ್ತಿದ್ದ ಕಾಯಕಜೀವಿಗಳ ಶೋಷಣೆಯನ್ನು ಕಣ್ಣಾರೆ ಕಂಡರು. ಅವರೆಲ್ಲ ಜಾತಿ ಉಪಜಾತಿಗಳಲ್ಲಿ ಹರಿದುಹಂಚಿ ಹೋಗಿದ್ದರು. ಬಲಿ, ನರಬಲಿಗಳಿಂದ ಮತ್ತು ಸ್ವಯಂ ಹಿಂಸೆಯಿಂದ ಕೂಡಿದ್ದ ಭಕ್ತಿ ಅಸಹನೀಯವಾಗಿತ್ತು. ಎಲ್ಲ ರೀತಿಯಿಂದಲೂ ಶೋಷಣೆಗೊಳಗಾಗಿದ್ದ ಕಾಯಕಜೀವಿಗಳು ಇಂಥ ಹಿಂಸಾಚರಣೆಯಿಂದ ಇನ್ನೂ ಹೆಚ್ಚಿನ ಕಷ್ಟಕರವಾದ ಜೀವನ ಸಾಗಿಸುತ್ತಿದ್ದರು. ಬಸವಣ್ಣನವರು ನಿರಾಕಾರನಾದ ಏಕದೇವನನ್ನು ಪರಿಚಯಿಸಿ ಅವನನ್ನು ಸರಳವಾಗಿ ಆರಾಧಿಸುವ ಕ್ರಮವನ್ನು ತೋರಿಸಿ ಕೊಟ್ಟರು. ಆ ಮೂಲಕ ಬಡವರ ಶೋಷಣೆಯನ್ನು ತಪ್ಪಿಸುವುದಲ್ಲದೆ ಅವರೆಲ್ಲರು ಜಾತಿ ಮತ ಪಂಥಗಳನ್ನು ದಾಟಿ ಜೇನುನೊಣಗಳಂತೆ ಒಂದಾಗುವ ಕಲೆಯನ್ನು ಕಲಿಸಿದರು. ಜನಸಾಮಾನ್ಯರನ್ನು, ಮಾನ್ಯರನ್ನಾಗಿಸಿದರು, ಸ್ವತಂತ್ರಧೀರರನ್ನಾಗಿಸಿದರು ಜೊತೆಗೆ 'ಸಮೂಹ'ವಾಗಿಸಿದರು. ಆ ಮೂಲಕ ಮನುಕುಲವೆಲ್ಲ ಒಂದು ಎಂದು ಸಾರಿದರು.

"ಚಿಂತನೆ ಮತ್ತು ಇರುವಿಕೆಯ ಸಂಬಂಧದ ಬಗ್ಗೆ ಕಾಳಜಿ ವಹಿಸುವುದು ತತ್ತ್ವಜ್ಞಾನದ ಪ್ರಮುಖವಾದ ಮೂಲ ಕರ್ತವ್ಯವಾಗಿದೆ" ಎಂದು ಫ್ರೆಡ್ರಿಕ್ ಎಂಗೆಲ್ಸ್ ತಿಳಿಸಿದ್ದಾರೆ. ಬಸವಣ್ಣನವರ ಚಿಂತನೆಗಳು ಆ ಕಾಲದ ಇರುವಿಕೆಯ ಆಧಾರದ ಮೇಲೆ ರೂಪುಗೊಂಡಿವೆ. ಹೀಗಾಗಿ ಅವರ ಚಿಂತನೆಗಳಿಗೆ ಕಟ್ಟಕಡೆಯ ಮನುಷ್ಯನೂ ಸ್ಪಂದಿಸುತ್ತಾನೆ.

"ವಸ್ತುವಿಲ್ಲದೆ ಚಲನಶೀಲತೆಯನ್ನು ಹೇಗೆ ಊಹಿಸಲು ಸಾಧ್ಯವಿಲ್ಲವೊ ಹಾಗೆಯ ಚಲನಶೀಲತೆ ಇಲ್ಲದ ವಸ್ತುವನ್ನು ಊಹಿಸಲು ಸಾಧ್ಯವಿಲ್ಲ. ವಸ್ತುವಿನಂತೆ ಚಲನಶೀಲತೆಯನ್ನು ಕೂಡ ಸೃಷ್ಟಿಸಲಿಕ್ಕಾಗದು ಮತ್ತು ಧ್ವಂಸ ಮಾಡಲಿಕ್ಕಾಗದು." ಎಂದು ಫ್ರೆಡ್ರಿಕ್ ಎಂಗೆಲ್ಸ್ ಹೇಳುತ್ತಾರೆ. ಈ ಚಲನಶೀಲತೆಯನ್ನು ಶರಣರು ವಸ್ತುಚೇತನ ಎಂದು ಕರೆದಿದ್ದಾರೆ. ಅದುವೆ ಅರಿವಿನ ಕುರುಹಾದ ಇಷ್ಟಲಿಂಗದ ಮೂಲ ರೂಪ. ವಸ್ತು ಸ್ವರೂಪದಲ್ಲಿರುವ ವಿಶ್ವವೇ ಜಂಗಮಲಿಂಗ. ಇಷ್ಟಲಿಂಗ ಮತ್ತು ಜಂಗಮಲಿಂಗ ಅಭೇದ್ಯವಾಗಿವೆ. ವಿಶ್ವವು ರೂಪಾಂತರಗೊಂಡು ಬಯಲಾದರೂ ನಾಶವಾಗುವುದಿಲ್ಲ. ಹಾಗೆಯೆ

ಅದರೊಳಗಿನ ವಸ್ತುಚೈತನ್ಯವೂ ನಾಶವಾಗುವುದಿಲ್ಲ ಎಂಬುದನ್ನು ಬಸವಣ್ಣನವರು ಸೂಚಿಸಿದ್ದಾರೆ.

ಈ ವಚನದಲ್ಲಿ ರಾಣಿಜೇನು ಚೈತನ್ಯದ ಪ್ರತೀಕವಾದರೆ ಇತರೆ ಜೇನುಹುಳುಗಳೆಲ್ಲ ವಸ್ತುರೂಪದಲ್ಲಿವೆ. ರಾಣಿಜೇನನ್ನು ಮತ್ತು ಜೇನುಹುಳುಗಳನ್ನು ಪ್ರತ್ಯೇಕಿಸಿ ಜೇನುತುಪ್ಪ ಪಡೆಯಲು ಸಾಧ್ಯವಿಲ್ಲ. ಹೀಗೆ ಚೈತನ್ಯ ಮತ್ತು ವಸ್ತುವಿನ ಸಂಬಂಧವಿದೆ. ಬಸವಣ್ಣನವರ ಅಂತಃಸಾಕ್ಷಿ ಸ್ವರೂಪದ ದೇವರು ಮತ್ತು ಜನಸಮುದಾಯವನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಜಗತ್ತಿನ ಜನಸಮುದಾಯವೆಲ್ಲ ಜಾತಿ, ಮತ, ಪಂಥ, ಕುಲ, ಧರ್ಮ, ಲಿಂಗ, ವರ್ಣ ಮತ್ತು ವರ್ಗಭೇದಗಳಿಲ್ಲದೆ ಒಂದಾದಾಗ ಮಾತ್ರ ಬಸವದರ್ಶನದ ಅರಿವಾಗುತ್ತದೆ.

●

# ಬಸವಧರ್ಮದ ವಿಶ್ವಸಂದೇಶ

ಬಸವಣ್ಣನವರು ಇಡೀ ವಿಶ್ವವನ್ನೇ ಜಂಗಮಲಿಂಗವಾಗಿ ಕಂಡರು. ಮಾನವನ ಒಳ ವಿಶ್ವದ ಚೈತನ್ಯದೊಡನೆ ಹೊರ ವಿಶ್ವವನ್ನು ಒಂದಾಗಿಸಿ ಇಷ್ಟಲಿಂಗವನ್ನು ಸೃಷ್ಟಿಸಿದರು. ಆದ್ದರಿಂದ ಜಂಗಮಲಿಂಗದ ಅರಿವಿಲ್ಲದೆ ಇಷ್ಟಲಿಂಗದ ಅರಿವು ಆಗದು. ಹೀಗೆ ಬಸವಣ್ಣನವರು ವ್ಯಷ್ಟಿ ಮತ್ತು ಸಮಷ್ಟಿಯ ಮಧ್ಯೆ ಅದ್ವೈತವನ್ನು ಸಾಧಿಸಿದರು. ಧರ್ಮವೆಂಬುದು ಸಾಮಾಜಿಕ ಜವಾಬ್ದಾರಿಯಿಂದ ಕೂಡಿದ ಆಂತರಿಕ ವಿಚಾರವೆಂಬ ನವಸಿದ್ಧಾಂತವನ್ನೇ ಮಂಡಿಸಿದರು. ನಾವು ಲೋಕದ ಆರಾಧನೆ ಮಾಡಿದಷ್ಟೂ ದೇವರಿಗೆ ಹತ್ತಿರದವರಾಗುತ್ತೇವೆ ಎಂದು ಸಾರಿದರು. ವಿಶ್ವಮಾನವರಾಗದೆ ಬಸವಧರ್ಮವನ್ನು ಆಚರಿಸಲಿಕ್ಕಾಗದು. ಬಸವಣ್ಣನವರ ಭಕ್ತಿಭಾವವು ಸರ್ವಸಮತಾ ಭಾವವೇ ಆಗಿದೆ. ಮಾನವನ ಅಹಂಕಾರವು ಎಲ್ಲ ರೀತಿಯ ಸಮತಾಭಾವಕ್ಕೆ ಅಡ್ಡಿ ಮಾಡುವಂಥದ್ದು. ಆದ್ದರಿಂದ ಸಮಾನತೆಯ ಪ್ರತಿಪಾದಕರು ಅಹಂಕಾರದಿಂದ ಹೊರಬರಬೇಕಾಗುತ್ತದೆ. ಜೀವನ ಪ್ರೀತಿಯನ್ನು ಹೊಂದಬೇಕಾಗುತ್ತದೆ. ಜಾತಿ, ಮತ, ಪಂಥ ಮತ್ತು ಕುಲಮದದಿಂದ ಹೊರಬರಬೇಕಾಗುತ್ತದೆ. ನಮ್ಮಲ್ಲಿರುವ ಸಂಪತ್ತನ್ನು ದೇವರ ಸೊತ್ತು ಎಂದು ಭಾವಿಸಿ ಲೋಕಕಲ್ಯಾಣಕ್ಕಾಗಿ ಬಳಸಬೇಕಾಗುತ್ತದೆ. ಬಡವ-ಶ್ರೀಮಂತ, ಹೆಣ್ಣು-ಗಂಡು, ಮೇಲು-ಕೀಳು ಎಂಬ ಭೇದಭಾವವನ್ನು ತೊರೆದು ಎಲ್ಲರ ಬಗ್ಗೆ ಸಮಭಾವವನ್ನು ತಾಳಬೇಕಾಗುತ್ತದೆ. ಇಡೀ ಸೃಷ್ಟಿಯು ಸೃಷ್ಟಿಕರ್ತನದೇ ಆಗಿರುವುದರಿಂದ ನಾವು ಈ ಲೋಕದಲ್ಲಿನ ಸಂಪತ್ತಿನ ಮೇಲೆ ನಮ್ಮ ವೈಯಕ್ತಿಕ ಹಕ್ಕು ಇದೆ ಎಂದು ಪ್ರತಿಪಾದಿಸದೆ ಅದರ ಮೇಲೆ ಪ್ರತಿಯೊಬ್ಬರ ಹಕ್ಕಿದೆ ಎಂಬ ಮೂಲ ಸತ್ಯವನ್ನು ಅರಿಯಬೇಕಾಗುತ್ತದೆ.

ಪ್ರತಿಯೊಬ್ಬರ ಹಕ್ಕು ಎಂದರೆ ಇನ್ನು ಮುಂದೆ ಈ ಲೋಕದಲ್ಲಿ ಜನಿಸುವವರ ಹಕ್ಕನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ಲೋಕದಲ್ಲಿ ಅತಿಥಿಯಂತೆ ಇದ್ದು

ಹೋಗಬೇಕಾಗುತ್ತದೆ. ಲೋಕಸೇವೆ ಮಾಡುವುದರ ಮೂಲಕ ಲೋಕದ ಋಣವನ್ನು ತೀರಿಸಬೇಕಾಗುತ್ತದೆ. ಅದನ್ನೇ ದೇವರ ಸೇವೆ ಎಂದು ಭಾವಿಸಬೇಕಾಗುತ್ತದೆ. ಮನುಷ್ಯ ಹೀಗೆ ಈ ಲೋಕದಲ್ಲಿ ಜೀವನ ಸಾಗಿಸಿದರೆ ದೇಶ ದೇಶಗಳ ಮಧ್ಯೆ ಯುದ್ಧಗಳಾಗುವುದಿಲ್ಲ. ಯಾರೂ ಅಪಮಾನಕ್ಕೊಳಗಾಗುವುದಿಲ್ಲ. ಯಾವ ಮಹಿಳೆಯ ಮೇಲೂ ಅತ್ಯಾಚಾರವಾಗುವುದಿಲ್ಲ. ಬಾಲ ಕಾರ್ಮಿಕರು ಇರುವುದಿಲ್ಲ. ವೇಶ್ಯಾವಾಟಿಕೆಗಳಿರುವುದಿಲ್ಲ. ಅಹಿಂಸೆಯು ಬದುಕಿನ ತಳಹದಿಯಾಗುವುದು. ಆತ್ಮಗೌರವ ಮತ್ತು ಪರಸ್ಪರ ಗೌರವ ಭಾವಗಳೊಂದಿಗೆ ಬದುಕು ಸುಂದರವಾಗುವುದು. ಆತ್ಮಾನಂದ ಮತ್ತು ಲೋಕಾನಂದದ ಮಧ್ಯೆ ಭೇದವಿರದು. ಕಾಯಕ ಮತ್ತು ದಾಸೋಹದ ಮೂಲಕ ಈ ಜಗತ್ತು ಹೆಚ್ಚು ಹೆಚ್ಚು ಸುಂದರವಾಗುತ್ತ ಸಾಗುವುದು. ಕಲ್ಪನೆಯ ಸ್ವರ್ಗ ಈ ಭೂಮಿಯ ಮೇಲೆ ವಾಸ್ತವದ ರೂಪ ತಾಳುವುದು. ಆಗ ಮಾನವ ಸದ್ಗುಣಗಳ ಆಗರವಾಗಿ, ಲೋಕವೇ ತಾನಾಗಿ ಬದುಕುವನು. ಹೀಗೆ ಬದುಕುವ ಮಾನವನೇ ನಿಜ ಮಾನವನು; ಇಡೀ ವಿಶ್ವಕ್ಕೆ ಒಬ್ಬನೇ ಇರುವ ಪರಮಾತ್ಮನಿಗೆ ಶರಣು ಹೋದವನು. ಅವನೇ ಶರಣ. ಇಂಥ ಶರಣ ಸಮಾನತೆಯ ಸಾಕಾರ ಮೂರ್ತಿಯಾಗಿರುವಂಥವನು. ಆತನ ದೃಷ್ಟಿಯಲ್ಲಿ ಯಾರೂ ಮೇಲಿನವರಲ್ಲ, ಯಾರೂ ಕೆಳಗಿನವರಲ್ಲ. ಆತ ಅಹಂಕಾರದಿಂದ ಮುಕ್ತನಾಗಿ ಸ್ವತಂತ್ರಧೀರನಾಗಿರುವಂಥವನು. ಅವನ ರೋಮರೋಮಗಳು ಅಂತಃಕರಣವನ್ನೇ ಜಪಿಸುತ್ತಿರುತ್ತವೆ.

ಮನುಷ್ಯನನ್ನು ಹೀಗೆ ಅತ್ಯುನ್ನತಮಟ್ಟಕ್ಕೆ ಒಯ್ಯುವ ಧರ್ಮವೇ ಬಸವಧರ್ಮ. ವಿಶ್ವದ ಎಲ್ಲ ಮಾನವೀಯ ಧರ್ಮಗಳ ಜೊತೆ ಹಾಲು ಸಕ್ಕರೆ ಬೆರೆತಂತೆ ಬೆರೆತು ಹೋಗುವಂಥದ್ದು. ಅಮಾನವೀಯವಾದ ವರ್ಣಭೇದ, ವರ್ಗಭೇದ, ಜಾತಿಭೇದ ಮತ್ತು ಲಿಂಗಭೇದವನ್ನು ಪ್ರತಿಪಾದಿಸುವ ಧರ್ಮಗಳಿಗೆ ಬೆಂಕಿಯ ಸ್ವರೂಪದಲ್ಲೂ ಭೇದವನ್ನು ವಿರೋಧಿಸುವ ಧರ್ಮಗಳ ಜೊತೆ ಬೆಳಕಿನ ಸ್ವರೂಪದಲ್ಲೂ ಇರುವಂಥದ್ದು. ಈ ವಿಶ್ವದಲ್ಲಿ ತುಂಬಿ ತುಳುಕುತ್ತಿರುವ ಅಜ್ಞಾನದ ಅಂಧಃಕಾರದಿಂದಾಗಿ ಜನ ಸಾವು ನೋವಿನ ನರಕಯಾತನೆಯನ್ನು ಅನುಭವಿಸುತ್ತಿದ್ದಾರೆ. ಎಲ್ಲಿ ನೋಡಿದಲ್ಲೆಲ್ಲ ಹಾಹಾಕಾರವೇ ಕಂಡುಬರುತ್ತಿದೆ. ನಾವು ಅಜ್ಞಾನದ ಅಂಧಕಾರವನ್ನು ಭೇದಿಸುತ್ತ ಮುನ್ನಡೆಯಬೇಕಾದರೆ ಬಸವ ಬೆಳಕನ್ನು ನಮ್ಮ ಪ್ರಜ್ಞೆ ಮತ್ತು ಭಾವದಲ್ಲಿ ತುಂಬಿಕೊಳ್ಳಬೇಕಾಗುತ್ತದೆ. ಭೇದಭಾವವಿಲ್ಲದ, ಸುಲಿಗೆ ಇಲ್ಲದ ಮತ್ತು ಯಾವುದೇ ತೆರನಾದ ದ್ವೇಷವಿಲ್ಲದ ಜಗತ್ತನ್ನು ಸೃಷ್ಟಿಸಬೇಕಾಗುತ್ತದೆ. ಬಸವಧರ್ಮವು ಇಂಥ ಒಂದು ಸುಂದರ ಜಗತ್ತನ್ನು ಸೃಷ್ಟಿಸುವ ವಿಶ್ವಧರ್ಮವಾಗಿದೆ. ಬಸವಧರ್ಮದ ಸಂದೇಶವು ಭಗವಾನ ಬುದ್ಧ, ಏಸು, ಪೈಗಂಬರ ಮುಂತಾದ ದಾರ್ಶನಿಕರು ಮತ್ತು ಪ್ರವಾದಿಗಳು ಸಾರಿದ ಸಂದೇಶದ

ತಿರುಳೇ ಆಗಿದೆ. ಹೀಗೆ ನಾವು ಬಸವ ಬೆಳಕಿನೊಂದಿಗೆ ವಿಶ್ವದ ಎಲ್ಲ ಜನಾಂಗಗಳ ಜೊತೆ ಒಂದಾಗುತ್ತ ಜಂಗಮಲಿಂಗವನ್ನು ಅರಿಯಬೇಕಾಗಿದೆ. ಅನುಪಮ ಆನಂದವನ್ನು ಅನುಭವಿಸಬೇಕಾಗಿದೆ.

**"ಕುಲಮದಕ್ಕೆ ಹೋರಿ ಜಂಗಮಭೇದವ ಮಾಡುವೆ, ಫಲವೇನು?**
**ನಿತ್ಯಲಿಂಗಾರ್ಚನೆ ಪ್ರಾಯಶ್ಚಿತ್ತ.**
**ಛಲಮದಕ್ಕೆ ಹೋರಿ ಲಿಂಗಭೇದವ ಮಾಡುವೆ;**
**ಜಂಗುಳಿಯ ಕಾವ ಗೋವ ಹಲವು ಪಶುವ ನಿವಾರಿಸುವಂತೆ**
**ತನು ಭಕ್ತನಾಯಿತ್ತು, ಎನ್ನ ಮನ ಭವಿ**
**ಕೂಡಲಸಂಗಮದೇವಾ."**

ವಿಭೂತಿ, ರುದ್ರಾಕ್ಷಿ ಮತ್ತು ಇಷ್ಟಲಿಂಗ ಧರಿಸುವುದರಿಂದ ನಮ್ಮ ತನು ಭಕ್ತನಾಗ ಬಹುದು. ಆದರೆ ಮನಸ್ಸು ಭಕ್ತನಾಗುವುದಿಲ್ಲ. ಅದು ಭವಿಯಾಗಿಯೇ ಉಳಿಯುವುದು. ಐಹಿಕ ವಸ್ತುಗಳ ವ್ಯಾಮೋಹದಲ್ಲಿ ಬದುಕು ಸವೆಸುವವನೇ ಭವಿ. ಅದರಿಂದ ಹೊರ ಬಂದು ವಿಶ್ವಪ್ರೇಮವನ್ನು ಸಾರುವವನೇ ಭಕ್ತ. ಬಸವಣ್ಣನವರು ಇಂಥ ಭಕ್ತರಾಗಿ ದ್ದರು. ಇಂಥ ವಿಶ್ವಪ್ರೇಮದ ಅರಿವಿನಿಂದಾಗಿ ಲೋಕದ ಗುರುವಾದರು. ಸತ್ಯದ ನಿಲವನ್ನು ಅರಿತು ಶರಣರಾದರು. ಲೋಕವೇ ತಾವಾಗಿ ಜಂಗಮವಾದರು. ಅವರು ಹೀಗೆ ಬೆಳೆಯುತ್ತ ಬೆಳೆಯುತ್ತ ಲಿಂಗಸ್ವರೂಪರಾದರು.

ಇದನ್ನೆಲ್ಲ ಸಾಧಿಸಬೇಕಾದರೆ ಮಾನವ ಎಲ್ಲ ರೀತಿಯ ಅಹಂಕಾರದಿಂದ ಹೊರಬರಬೇಕು. ಪ್ರತಿಯೊಂದಕ್ಕೂ 'ನಾನು' ಎನ್ನುವವರಿಗಿಂತ ಕಿರಿಯರು ಯಾರೂ ಇಲ್ಲ. 'ನಾನು' ಎಂಬುದನ್ನು ಅರಿಯದ ಶಿವಭಕ್ತರಿಗಿಂತ ಹಿರಿಯರು ಯಾರೂ ಇಲ್ಲ.

**"ಎನ್ನಿಂದ ಕಿರಿಯರಿಲ್ಲ, ಶಿವಭಕ್ತರಿಂದ ಹಿರಿಯರಿಲ್ಲ.**
**ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ.**
**ಕೂಡಲಸಂಗಮದೇವಾ ಎನಗಿದೇ ದಿಬ್ಯ."**

ಎಂಬ ಭಕ್ತಿ ಭಾವವನ್ನು ಹೊಂದಬೇಕಾದರೆ ಎಲ್ಲ ಕಾಯಕಜೀವಿಗಳ ಅನುಭವ ವನ್ನು ತನ್ನದಾಗಿಸಿಕೊಳ್ಳಬೇಕಾಗುತ್ತದೆ. ಇಂಥ ಅನುಭವವು ಅನುಭಾವಕ್ಕೆ ನಾಂದಿ ಯಾಗುತ್ತದೆ. ಎಲ್ಲ ಐಹಿಕ ಆಸೆಗಳಿಂದ ಹೊರಬಂದ ಭಕ್ತನು ಸದಾ ಸ್ವಾನುಭವ ಮತ್ತು ಲೋಕಾನುಭವಗಳನ್ನು ಒಂದಾಗಿಸಿ ಅನುಭಾವವನ್ನು ಸಾಧಿಸುವುದರಲ್ಲಿಯೇ ತಲ್ಲೀನನಾಗಿರುತ್ತಾನೆ.

"ಭಕ್ತಿ ಇಲ್ಲದ ಬಡವ ನಾನಯ್ಯ
ಕಕ್ಕಯ್ಯನ ಮನೆಯಲ್ಲೂ ಬೇಡಿದೆ,
ಚೆನ್ನಯ್ಯನ ಮನೆಯಲ್ಲೂ ಬೇಡಿದೆ,
ದಾಸಯ್ಯನ ಮನೆಯಲ್ಲೂ ಬೇಡಿದೆ,
ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದೆಡೆ
ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ."

ಬಸವಣ್ಣನವರು ಅನುಭಾವದ ಜಗತ್ತನ್ನು ಅನುಭವದ ಜಗತ್ತಿನ ಮೂಲಕವೇ ನೋಡಿದರು. ಚೈತನ್ಯ ಮತ್ತು ವಸ್ತು ಅಭೇದ್ಯವಾಗಿವೆ ಎಂಬುದನ್ನು ಅವರು ಅರಿತು ಕೊಂಡಿದ್ದರು. ಆ ಮೂಲಕ ವ್ಯಕ್ತಿ ಮತ್ತು ಸಮಾಜದ ಸಂಬಂಧವನ್ನು ತೋರಿಸಿಕೊಟ್ಟರು. ವ್ಯಕ್ತಿ ಮತ್ತು ಸಮಾಜದ ಸಂಬಂಧವೆಂಬುದು ಪ್ರಾಣ ಮತ್ತು ದೇಹಗಳ ಸಂಬಂಧದಂತೆ ಎಂಬುದನ್ನು ಮನವರಿಕೆ ಮಾಡಿಕೊಟ್ಟರು.

"ಎಡದ ಕೈಯಲಿ ನಿಗಳವನಿಕ್ಕಿ
ಬಲದ ಕೈಯ ಕಡಿದುಕೊಂಡಡೆ ನೋಯದಿಪ್ಪುದೆ?
ಪ್ರಾಣವೊಂದಾಗಿ ದೇಹ ಬೇರಿಲ್ಲ.
ಲಿಂಗವ ಪೂಜಿಸಿ ಜಂಗಮನುದಾಸೀನವ ಮಾಡಿದಡೆ
ಬೆಂದೆನಯ್ಯಾ ನಾನು, ಕೂಡಲಸಂಗಮದೇವಾ."

ಎಂದು ಬಸವಣ್ಣನವರು ಹೇಳುವಲ್ಲಿ ಹೊರಲೋಕದ ಅನುಭವ ಮತ್ತು ಒಳಲೋಕದ ಅನುಭಾವದ ಘನಸಂಬಂಧದ ಪರಿಕಲ್ಪನೆ ಕೊಡುತ್ತಾರೆ. ಮಾನವನ ಐಹಿಕ ಬದುಕಿನ ಅನುಭವದ ಜಗತ್ತನ್ನು ಕಡೆಗಣಿಸದೆ ಅದರೊಳಗೆ ಅನುಭಾವದ ಸಾಗರವನ್ನು ಸೃಷ್ಟಿಸುವುದರಲ್ಲಿ ಬಸವಣ್ಣನವರು ತಲ್ಲೀನರಾಗಿದ್ದರು. ಈ ಅನುಭವದ ಜಗತ್ತನ್ನು ಎಲ್ಲ ಕಾಯಕಜೀವಿಗಳು ಕೂಡಿ ಸೃಷ್ಟಿಸುತ್ತಾರೆ. ದುಡಿಯುವವರಿಲ್ಲದೆ ಈ ಜಗತ್ತು ಬರಡಾಗುತ್ತದೆ ಎಂಬುದನ್ನು ಬಸವಣ್ಣನವರು ಸೂಚಿಸಿದ್ದಾರೆ. ಇಂಥ ಕಾಯಕ ಜೀವಿಗಳಿಗಾಗಿ ಅವರು ಸರಳ ಧರ್ಮವನ್ನು ಕೊಟ್ಟರು. ಆ ಮೂಲಕ ಕಾಯಕಜೀವಿಗಳು ಮತ್ತು ಒಟ್ಟಾರೆ ಲೋಕದ ಜನರು ಎಲ್ಲ ರೀತಿಯ ಮೂಢನಂಬಿಕೆ ಮತ್ತು ಹಿಂಸಾರಾಧನೆಯಿಂದ ಹೊರಬರಬೇಕು. ಯಾವುದೇ ರೀತಿಯಲ್ಲಿ ಹಣವನ್ನು ವ್ಯಯಿಸದೆ, ಮೂಢನಂಬಿಕೆಗೆ ಶರಣಾಗದೆ, ನರಬಲಿ, ಪ್ರಾಣಿಬಲಿ ಕೊಟ್ಟು ದೇವರನ್ನು ಒಲಿಸಿಕೊಳ್ಳುವ ಭ್ರಮೆಗೆ ಒಳಗಾಗದೆ ಸರಳ ಸಹಜವಾಗಿ ದೇವರ ಆರಾಧನೆ ಮಾಡುತ್ತ ಲೋಕದ ಮಾನವರಲ್ಲಿ ಏಕತೆಯನ್ನು ಸಾಧಿಸಬೇಕು ಎಂಬ ಕನಸನ್ನು ಬಸವಣ್ಣನವರು ಕಂಡಿದ್ದರು.

"ಲಿಂಗದಲ್ಲಿ ಕಠಿಣವುಂಟೆ? ಜಂಗಮದಲ್ಲಿ ಕುಲವುಂಟೆ? ಪ್ರಸಾದದಲ್ಲಿ ಅರುಚಿಯುಂಟೆ?" ಎಂದು ಬಸವಣ್ಣನವರು ಪ್ರಶ್ನಿಸುವಲ್ಲಿ ಮೇಲೆ ತಿಳಿಸಿದ ಧೋರಣೆಯನ್ನೇ ತಾಳಿದ್ದಾರೆ. ಲೋಕದ ಮಾನವರು ಒಂದಾಗುವವರೆಗೆ ಈ ಜಗತ್ತಿನಲ್ಲಿ ಅಶಾಂತಿ ಎಂಬುದು ಇರುತ್ತದೆ. ಸಮೂಹ ಬಿಟ್ಟು ಬದುಕಲಿಕ್ಕಾಗದು. ಸಮೂಹ ಬಿಟ್ಟರೆ ನಮಗೆ ಅಸ್ತಿತ್ವವೇ ಇಲ್ಲ.

**"ಜಲ ತಪ್ಪಿದ ಮತ್ಸ್ಯ ಬದುಕೂದೇ ಸೋಜಿಗ**
**ಗಣತಿಂಥಿಣಿಯೊಳಗಿರಿಸೆನ್ನ ಲಿಂಗವೆ.**
**ಶಿವಶಿವಾ ಕೂಡಲಸಂಗಮದೇವಾ,**
**ಸೆರಗೊಡ್ಡಿ ಬೇಡುವೆನು."**

ಎಂದು ಬಸವಣ್ಣನವರು ನಮ್ಮ ಬದುಕಿನಲ್ಲಿ ಜನಸಮುದಾಯದ ಮಹತ್ತ್ವವನ್ನು ಸಾರಿದ್ದಾರೆ. ವಿಶ್ವಧರ್ಮವಾದ ಬಸವಧರ್ಮದ ಬಹುದೊಡ್ಡ ಸಂದೇಶ ಇದಾಗಿದೆ. ಇಂಥ ಸಮಾಜವೇ ದೈವವಾಗುವುದು. ವ್ಯಕ್ತಿಯ ಬಳಿ ಇರುವ ಸೊತ್ತಿನ ಮೇಲೆ ಸಮಾಜವೆಂಬ ದೈವದ ಹಕ್ಕು ಇರುವುದು. ಇದೇ ಜಂಗಮಲಿಂಗ. ಎಲ್ಲರ ವೈಯಕ್ತಿಕ ಆಸ್ತಿಯ ಮೇಲೆ ಈ ಜಂಗಮಲಿಂಗದ ಹಕ್ಕು ಇರುತ್ತದೆ. ಈ ಹಕ್ಕಿನಲ್ಲಿ ಎಲ್ಲ ಜನಾಂಗಗಳ ಮಾನವಹಕ್ಕುಗಳು ಸೇರಿವೆ, ದಲಿತರ, ಮಹಿಳೆಯರ, ಮಕ್ಕಳ, ಅಲ್ಪಸಂಖ್ಯಾತರ, ಬಡವರ ಹೀಗೆ ಸಕಲರ ಹಕ್ಕುಗಳು ಸೇರಿವೆ. ಎಲ್ಲರ ವಿಮೋಚನೆಯೂ ಸೇರಿದೆ. ವಿಶ್ವಧರ್ಮ ಎಂದರೆ ವಿಶ್ವದ ಎಲ್ಲರಿಗೂ ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ಜವಾಬ್ದಾರಿ ಮತ್ತು ಸಮಾನವಾದ ಹಕ್ಕುಗಳನ್ನು ಒದಗಿಸುವಂಥದ್ದು. ಎಲ್ಲ ಬಂಧನಗಳಿಂದ ಮುಕ್ತಗೊಳಿಸುವಂಥದ್ದು. ಎಲ್ಲರಿಗೂ ಒಬ್ಬನೇ ದೇವರು. ಪಂಚಾಮಹಾಭೂತಗಳ ಮೇಲೆ ಎಲ್ಲರ ಹಕ್ಕುಗಳು ಸಮಾನವಾಗಿವೆ. ಬಡತನ ಮತ್ತು ಶ್ರೀಮಂತಿಕೆ ಎಂಬುವು ಸ್ವಾರ್ಥ ವ್ಯವಸ್ಥೆಯಿಂದ ಹುಟ್ಟಿಕೊಂಡಿವೆ. ಕೃತ್ರಿಮವಾಗಿವೆ. ಪುರುಷರ ದಬ್ಬಾಳಿಕೆಯಿಂದಾಗಿ ಮಹಿಳೆಯರ ಹಕ್ಕುಗಳು ಘಾಸಿಗೊಂಡಿವೆ ಹೊರತಾಗಿ ನಿಜವಾದ ಧರ್ಮದ ಕಾರಣದಿಂದಲ್ಲ. ನೋವು, ಅಪಮಾನ ಮತ್ತು ಹಿಂಸೆ ಧರ್ಮಬಾಹಿರ. ಹೀಗೆ ಸಂದೇಶ ಸಾರುವ ಧರ್ಮವೇ ವಿಶ್ವಧರ್ಮ. ಬಸವಧರ್ಮದ ವಿಶ್ವಸಂದೇಶದಲ್ಲಿ ಎಲ್ಲ ಮಾನವರ ಆತ್ಮಗೌರವದ ಬಗ್ಗೆ ಕಾಳಜಿ ಇದೆ. ಎಲ್ಲ ಜೀವಗಳು ಭೌತಿಕವಾಗಿ ಕೂಡ ಸುಖವಾಗಿ ಬದುಕಬೇಕೆಂಬ ಕಳಕಳಿ ಇದೆ. ಅದಕ್ಕಾಗಿ ಸಮಾನವಾಗಿ ಸಂಪತ್ತಿನ ಹಂಚಿಕೆಯಾಗಬೇಕು. ಶ್ರೀಮಂತರು ತಮ್ಮಲ್ಲಿನ ಸಂಪತ್ತಿನ ಒಡೆಯ ಜಂಗಮಲಿಂಗ ಎಂದು ಭಾವಿಸಬೇಕು. "ಒಡೆಯರಿಗೆ ಒಡವೆಯನೊಪ್ಪಿಸಲಾರದೆ ಮೊರೆಯಿಡುವ ಮನವ ನಾನೇನೆಂಬೆ?" ಎಂದು ಬಸವಣ್ಣನವರು ಪ್ರಶ್ನಿಸುತ್ತಾರೆ.

ಜಗತ್ತಿನಲ್ಲಿ ಯಾವುದೇ ಕಾಯಕ ದೊಡ್ಡದಲ್ಲ ಅಥವಾ ಚಿಕ್ಕದಲ್ಲ ಎಂಬುದು ಬಸವಧರ್ಮದ ಮಹಾನ್ ಸಂದೇಶವಾಗಿದೆ. ಮಾನವರು ತಾವು ಮಾಡುವ ಕಾಯಕದಲ್ಲಿ ಇಹ ಪರಗಳಿಗೆ ಸಂಬಂಧಿಸಿದ ತತ್ತ್ವದ ಸಾಕ್ಷಾತ್ಕಾರ ಮಾಡಿಕೊಂಡಾಗ ಬದುಕ್ಕಿದು ಸಾರ್ಥಕವಾಗುವುದು. ಕಾಯಕದ ಆನಂದವೇ ಆನಂದ. ಕಾಯಕದಲ್ಲಿ ತಲ್ಲೀನರಾದಾಗ ಮಾತ್ರ ಅದರ ಅರಿವಾಗುವುದು. ಕಾಯಕದಿಂದ ಶಾರೀರಿಕ ಮತ್ತು ಮಾನಸಿಕ ಆರೋಗ್ಯದ ವೃದ್ಧಿಯಾಗುವುದು. ಶರೀರವು ಸುಂದರವಾಗುವುದು. ಬದುಕುವ ಧೈರ್ಯ ಬರುವುದು. ಶ್ರಮದ ಅನಂದ ಕೊಳ್ಳುವಂಥದಲ್ಲ ಅದನ್ನು ಬೆವರು ಸುರಿಸೇ ಪಡೆದುಕೊಳ್ಳಬೇಕು. ಹೀಗೆ ಶ್ರಮವು ನಮ್ಮ ನಾಲಗೆ ರುಚಿಯನ್ನು ಹೆಚ್ಚಿಸುವುದು ಮತ್ತು ವಿಶ್ರಾಂತಿ ಎಂದರೆ ಏನೆಂಬುದನ್ನು ತೋರಿಸಿಕೊಡುವುದು. ಆದ್ದರಿಂದ ಬಸವಣ್ಣನವರ ದೃಷ್ಟಿಯಲ್ಲಿ ಕಾಯಕಭೇದವಿಲ್ಲ. ಅವರಿಗೆ ಪ್ರಧಾನಿಯೂ ಅಷ್ಟೆ ಕಸಗುಡಿಸುವವರೂ ಅಷ್ಟೆ ಎಲ್ಲರೂ ಸಮಾನರು. ತಮ್ಮ ತಮ್ಮ ಕಾಯಕದಲ್ಲಿ ನಿಷ್ಠೆ ತೋರುವವರೆಲ್ಲ ಪೂಜ್ಯರು. ಮಾದಾರ ಚೆನ್ನಯ್ಯನವರು ತಮ್ಮ ಕಾಯಕ ನಿಷ್ಠೆ ಮತ್ತು ದಾಸೋಹ ಪ್ರಜ್ಞೆಯಿಂದಾಗಿ ಬಸವಣ್ಣನವರ ದೃಷ್ಟಿಯಲ್ಲಿ ಕುಲಕ್ಕೆ ತಿಲಕಗಾದರು. ಕೂಡಲಸಂಗಮದೇವರಿಗಿಂತಲೂ ಅಧಿಕರಾದರು. ಇದೇ ವಿಶ್ವದೃಷ್ಟಿ. ಇದೇ ಮಾನವ ಪ್ರೇಮ. ಸಕಲವೃತ್ತಿಗಳನ್ನು ಗೌರವಿಸುವ ರೀತಿ ಇದು. ಒಳ್ಳೆಯದನ್ನು ಗುರುತಿಸುವ ಕ್ರಮ ಇದು. ಬಸವಣ್ಣನವರು ಜಾತಿ ವಿಷವನ್ನು ದೂರ ಸರಿಸಿ ಕಾಯಕದ ಅಮೃತವನ್ನು ಕುಡಿಸಿದರು. ಆಗ ಎಲ್ಲ ಕಾಯಕಜೀವಿಗಳು ಗೌರವಾರ್ಹರಾದರು. ಕಾಯಕ ಜೀವಿಗಳೆಲ್ಲ ಜಾತಿ ಮತ್ತು ಕುಲಗಳನ್ನು ಮೀರಿ ಒಂದಾದರು. ಎಲ್ಲ ಅಂತಸ್ತುಗಳ ಭ್ರಮೆಯನ್ನು ಅಳಿಸಿ ಬದುಕಿದರು.

**"ದೇವಸಹಿತ ಭಕ್ತ ಮನೆಗೆ ಬಂದಡೆ**
**ಕಾಯಕವಾವುದೆಂದು ಬೆಸಗೊಂಡೆನಾದಡೆ**
**ನಿಮ್ಮಾಣೆ! ನಿಮ್ಮ ಪುರಾತರಾಣೆ! ತಲೆದಂಡ! ತಲೆದಂಡ!**
**ಕೂಡಲಸಂಗಮದೇವಾ ಭಕ್ತರಲ್ಲಿ ಕುಲವನರಿಸಿದಡೆ**
**ನಿಮ್ಮ ರಾಣಿವಾಸದಾಣೆ."**

ಎಂದು ಬಸವಣ್ಣನವರು ಹೇಳುವಾಗ ಎಲ್ಲ ಕಾಯಕಗಳ ಜನಸಮುದಾಯಗಳನ್ನು ಒಂದುಗೂಡಿಸುವ ಆಶಾಭಾವವಿದೆ. ಹೀಗೆ ಬಸವ ತತ್ತ್ವ ವಿಶ್ವತತ್ತ್ವವಾಗಿ ಬೆಳಗುತ್ತಲೇ ಇದೆ.

**"ಮರಕ್ಕೆ ಬೇರು ಬಾಯಿಯೆಂದು ತಳಯಿಂಕೆ ನೀರನೆರೆದಡೆ**
**ಮೇಲೆ ಪಲ್ಲವಿಸಿತ್ತು ನೋಡಾ.**

ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದಡೆ
ಮುಂದೆ ಸಕಳಾರ್ಥವನೀವನು.
ಆ ಜಂಗಮವ ಹರನೆಂದು ಕಂಡು, ನರನೆಂದು ಭಾವಿಸಿದಡೆ
ನರಕ ತಪ್ಪದು ಕಾಣಾ ಕೂಡಲಸಂಗಮದೇವಾ."

ಲೋಕಸೇವೆಯೆ ದೇವರ ಆರಾಧನೆ ಎಂಬುದರಲ್ಲಿ ಬಸವಣ್ಣನವರಿಗೆ ಅಚಲವಾದ ವಿಶ್ವಾಸವಿದೆ. ಈ ಲೋಕಸೇವೆಯ ಪ್ರಜ್ಞೆಯಲ್ಲಿ ಅಂತಃಕರಣವಿದೆ, ಏಕೋಭಾವವಿದೆ, ಜಗತ್ತನ್ನು ಎಲ್ಲ ದುಃಖಗಳಿಂದ ಬಿಡುಗಡೆಗೊಳಿಸುವ ಮಾರ್ಗವಿದೆ. ಆದರೆ ಲೋಕ ಕಲ್ಯಾಣದ ಪ್ರಜ್ಞೆ ಬಂದರೂ ಸ್ವಾರ್ಥವೇ ಪ್ರಧಾನವಾದರೆ ಹೀನ ಬದುಕು ತಪ್ಪುವುದಿಲ್ಲ ಎಂಬ ಎಚ್ಚರಿಕೆಯನ್ನು ಬಸವಣ್ಣನವರು ನೀಡುತ್ತಾರೆ.

ಜಗತ್ತಿನ ಜನರೆಲ್ಲ ಒಂದು ಎಂಬ ಭಾವ ಮೂಡಬೇಕಾದರೆ ಅವರೆಲ್ಲರಿಗೂ ಶಾಶ್ವತನಾದ ಒಬ್ಬನೇ ದೇವರು ಎಂಬುದನ್ನು ಸಾರಬೇಕಾಗುತ್ತದೆ.

"ಸ್ವಾಮಿ ನೀನು, ಶಾಶ್ವತ ನೀನು,
ಎತ್ತಿದೆ ಬಿರಿದ ಜಗವೆಲ್ಲರಿಯಲು,
ಮಹಾದೇವ, ಮಹಾದೇವ,
ಇಲ್ಲಿಂದ ಮೇಲೆ ಶಬ್ದವಿಲ್ಲ.
ಪಶುಪತಿ ಜಗಕ್ಕೇಕೋದೇವ
ಸ್ವರ್ಗ ಮರ್ತ್ಯ ಪಾತಾಳದೊಳಗೆ
ಒಬ್ಬನೇ ದೇವ ಕೂಡಲಸಂಗಮದೇವ"

ದೇವನೊಬ್ಬ ನಾಮಹಲವು. ಜಗತ್ತಿನ ಎಲ್ಲ ದೇವರ ಹೆಸರುಗಳು ಒಬ್ಬನೇ ದೇವರಿಗೆ ಕರೆದ ಹೆಸರುಗಳಾಗಿವೆ. ದೇವರು ಬಸವಣ್ಣನವರಿಗೆ ದಯೆಯ ರೂಪದಲ್ಲಿ ಕಾಣಿಸಿದ್ದಾನೆ. ಅಂತೆಯೆ ಬಸವಣ್ಣನವರು ದಯವೇ ಧರ್ಮದ ಮೂಲವಯ್ಯಾ ಎಂದು ಹೇಳಿದ್ದಾರೆ. ಜಗತ್ತಿನ ಎಲ್ಲ ಜನಾಂಗಗಳು ತಮ್ಮ ತಮ್ಮ ದೇವರ ಹೆಸರುಗಳನ್ನು ದಯೆಗೆ ಸಮೀಕರಿಸಿ ಜೀವಕಾರುಣ್ಯದಿಂದ ಬದುಕಿದರೆ ಈ ಭೂಮಿಯೇ ಸ್ವರ್ಗ ವಾಗುತ್ತದೆ. ಹೀಗೆ ಭಾವಿಸಿದವರೆಲ್ಲ ಸಹಜವಾಗಿಯೇ ಶರಣರಾಗುತ್ತಾರೆ. ಇಂಥ ಶರಣರು ಛಲದಿಂದ ಬದುಕಬೇಕಾಗುತ್ತದೆ.

"ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ;
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ;
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ;

ಛಲಬೇಕು ಶರಣಂಗೆ ಲಿಂಗಜಂಗಮುವನೊಂದೆಂಬ;
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ;
ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ."

ಮೌಲ್ಯಗಳಿಗಾಗಿ ಮಾನವರು ಸದಾ ತಮ್ಮೊಳಗೆ ಮತ್ತು ಹೊರಗೆ ಹೋರಾಟ ಮಾಡಲೇಬೇಕಾಗುತ್ತದೆ. ಒಳ್ಳೆಯದನ್ನು ಸಾಧಿಸುವ ಛಲ ಬೇಕಾಗುತ್ತದೆ. ಅಂಥ ಛಲವಿಲ್ಲದವರನ್ನು ಕೂಡಲಸಂಗಮದೇವರು ಮೆಚ್ಚುವುದಿಲ್ಲ.

ಪರಧನದ ಆಸೆಯಿಂದಲೇ ಜಗತ್ತಿನಲ್ಲಿ ಅಪರಾಧಗಳು ಹೆಚ್ಚಾಗುತ್ತಿವೆ. ಪರಸತಿಯರ ಸಂಗದಿಂದಾಗಿ ಏಡ್ಸ್ ಎಂಬ ಮಾರಕ ರೋಗ ಮಾನವನ ಭವಿಷ್ಯಕ್ಕೇ ಸವಾಲೆಸೆಯುವ ಹಾಗೆ ವಿಶ್ವಾದ್ಯಂತ ಹಬ್ಬುತ್ತಿದೆ. ನೂರೆಂಟು ದೈವಗಳಿಂದಾಗಿ ಮಾನವ ಸಂಬಂಧಗಳ ಮಧ್ಯೆ ಬಿರುಕುಗಳು ಬಿಟ್ಟಿವೆ. ಸಕಲಜೀವಿಗಳ ಮಧ್ಯೆ ದೇವರ ಅಸ್ತಿತ್ವವನ್ನು ಕಾಣದೆ ಇರುವುದರಿಂದ ಎಲ್ಲಡೆ ಕ್ರೌರ್ಯ ಹೆಚ್ಚುತ್ತಿದೆ. ದೇವರಿಗೆ ಅರ್ಪಿಸಿ ಪಡೆಯುವುದೇ ಪ್ರಸಾದ. ಇಲ್ಲಿ ವಿನಯವೇ ಪ್ರಧಾನವಾಗಿರುತ್ತದೆ. ಎಲ್ಲವೂ ದೇವರ ಸೊತ್ತು ಎಂಬ ಭಾವ ಮೂಡುತ್ತದೆ. ಇಂಥ ಮೌಲ್ಯಗಳ ಸಾಧನೆಗಾಗಿ ಛಲವಂತರಾಗಬೇಕೆಂದು ಬಸವಣ್ಣನವರು ಹೇಳುತ್ತಾರೆ.

"ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯಾ ತಂದೆ;
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ;
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ;
ನಿಮ್ಮ ಶರಣರ ಪಾದವಲ್ಲದೆ
ಅನ್ಯವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವಾ."

ಒಳ್ಳೆಯದನ್ನು ಸಾಧಿಸುವುದಕ್ಕಾಗಿ ಮಾನವ ಛಲವಂತನಾಗಬೇಕಾದರೆ ತನ್ನೊಳಗೇ ಅನೇಕ ವಿಧದ ನಿರ್ಬಂಧಗಳನ್ನು ಹೇರಿಕೊಳ್ಳಬೇಕಾಗುತ್ತದೆ. ಕೆಲವೊಂದು ಕಡೆ ಹೋಗದಂತೆ ನಾವು ಹೆಳವರಾಗಬೇಕಾಗುತ್ತದೆ. ಕೆಲವೊಂದನ್ನು ನೋಡದಂತೆ ಕುರುಡರಾಗಬೇಕಾಗುತ್ತದೆ. ಕೆಲವೊಂದನ್ನು ಕೇಳದಂತೆ ಕಿವುಡರಾಗಬೇಕಾಗುತ್ತದೆ. ಇಂಥ ಸಂಸ್ಕಾರವನ್ನು ಬೆಳೆಸಿಕೊಳ್ಳಲು ಒಳ್ಳೆಯವರ ಸಾನಿಧ್ಯ ಅವಶ್ಯವಾಗಿದೆ. ಒಳ್ಳೆಯವರೆಲ್ಲ ಶರಣರು. ಹೀಗೆ ನಾವು ಒಳ್ಳೆಯವರಾಗಲು ಬಸವಣ್ಣನವರು ದಾರಿ ತೋರಿಸುತ್ತಾರೆ.

ಬಸವಣ್ಣನವರು ನಮ್ಮನ್ನು ಹುಟ್ಟು, ಸಾವು, ರಜಸ್ಸು, ಎಂಜಲು ಮತ್ತು ಕುಲ ಸೂತಕಗಳಿಂದ ಮುಕ್ತಗೊಳಿಸಿ ಲೋಕದ ಜನರೊಂದಿಗೆ ಒಂದಾಗಿ ಬದುಕುವುದನ್ನು ಕಲಿಸಿದ್ದಾರೆ. ನಾವು ಒಳಗೂ ಹೊರಗೂ ಶುದ್ಧವಾಗಿರುವಂತೆ ನೋಡಿಕೊಳ್ಳುತ್ತಾರೆ.

"ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ;
ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ;
ಕೂಡಲಸಂಗಮದೇವಾ, ನಿಮ್ಮ ಮನೆಯ ಮಗನೆಂದೆನಿಸಯ್ಯಾ."

ಹೀಗೆ ಬಸವಣ್ಣನವರು ದೇವರಲ್ಲಿ ನಿವೇದನೆ ಮಾಡಿಕೊಳ್ಳುತ್ತಾರೆ. ನಾವೆಲ್ಲ ಸೃಷ್ಟಿಕರ್ತನ ಮನೆಯ ಮಕ್ಕಳಾಗಬೇಕಾದರೆ. ಆತ ಸೃಷ್ಟಿಸಿದ ಜಗತ್ತಿನ ಬಗ್ಗೆ ಸಮಭಾವದ ಕಾಳಜಿ ಇರಬೇಕಾಗುತ್ತದೆ.

"ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ.
ಒಮ್ಮನವಾದರೆ ಒಡನೆ ನುಡಿವನು; ಇಮ್ಮನವಾದರೆ ನುಡಿಯನು.
ಕಾಣಿಯ ಸೋಲ; ಅರ್ಧಗಾಣಿಯ ಗೆಲ್ಲ!
ಜಾಣ ನೋಡವ್ವಾ ನಮ್ಮ ಕೂಡಲಸಂಗಮದೇವ!"

ಕೂಡಲಸಂಗಮದೇವ ಲೋಕವ್ಯವಹಾರದಲ್ಲಿ ತೊಡಗಿ ವ್ಯಾಪಾರಕ್ಕೆ ಕುಳಿತಿದ್ದಾನೆ. ಆತ ಈ ವ್ಯಾಪಾರದಲ್ಲಿ ಒಂದು ಪೈಸೆಯಷ್ಟೂ ಕಡಿಮೆ ತೆಗೆದುಕೊಳ್ಳುವುದಿಲ್ಲ. ಅರ್ಧ ಪೈಸೆಯಷ್ಟೂ ಹೆಚ್ಚಿಗೆ ತೆಗೆದುಕೊಳ್ಳುವುದಿಲ್ಲ. ಪರಿಪೂರ್ಣವಾದ ಜೀವಜಾಲ ಸಮತೋಲನವನ್ನು ಕಾಪಾಡುವುದು ಈ ದೇವರ ವ್ಯಾಪಾರವಾಗಿದೆ! ಹೀಗೆ ಬಸವಣ್ಣನವರು ನಮಗೆ ಪರಿಸರ ಪ್ರಜ್ಞೆಯನ್ನು ಮೂಡಿಸುತ್ತಾರೆ. ಬಸವಧರ್ಮ ನಿಸರ್ಗ ಧರ್ಮವಾಗಿದೆ; ಜೀವಜಾಲ ಸಮತೋಲನದ ಧರ್ಮವಾಗಿದೆ; ಮಾನವ ವಿಮೋಚನೆಯ ಧರ್ಮವಾಗಿದೆ; ಸಮಾನತೆಯ ಧರ್ಮವಾಗಿದೆ, ಮಾನವ ಹಕ್ಕುಗಳ ಧರ್ಮವಾಗಿದೆ; ಮಹಿಳೆಯರು ಮತ್ತು ದಲಿತರ ಸಮಾನತೆಯನ್ನು ಸಾರುವ ಧರ್ಮವಾಗಿದೆ. ಇದನ್ನೆಲ್ಲ ಸಾಧಿಸಬೇಕಾದರೆ ಈ ಬದುಕು ಮನುಷ್ಯ ಕೇಂದ್ರಿತ ವಾಗಬಾರದು. ಹಾಗೆ ಆದರೆ ಅದು ಉಳ್ಳವರ ದುರಾಸೆ ಕೇಂದ್ರಿತ ವ್ಯವಸ್ಥೆಗೆ ನಾಂದಿ ಹಾಡುತ್ತದೆ. ಆದ್ದರಿಂದ ಬಸವಣ್ಣನವರು "ಸಕಲಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೆ ಕುಲಜರು" ಎಂದು ಹೇಳಿ ಜೀವಕೇಂದ್ರಿತ ವ್ಯವಸ್ಥೆಯನ್ನು ಬೆಂಬಲಿಸಿದ್ದಾರೆ. ಈಗ ಜಗತ್ತು ಜೀವಕೇಂದ್ರಿತವಾಗಿರಬೇಕು, ಮನುಷ್ಯ ಕೇಂದ್ರಿತವಾದರೆ ಸರ್ವನಾಶ ಎಂದು ಇಂದಿನ ಪರಿಸರ ವಿಜ್ಞಾನಿಗಳು ಎಚ್ಚರಿಸುತ್ತಿದ್ದಾರೆ. ಬಸವಣ್ಣನವರು ನಮಗೆ ಇಂಥ ಎಚ್ಚರಿಕೆಯನ್ನು ೧೨ನೇ ಶತಮಾನದಲ್ಲೇ ಕೊಟ್ಟಿದ್ದಾರೆ.

ಮನುಷ್ಯರು ತಪ್ಪು ಮಾಡುವುದು ಸಹಜ. ಆದರೆ ತಿದ್ದಿಕೊಳ್ಳುವ ಮೂಲಕ ಆ ತಪ್ಪಿನಿಂದ ಹೊರಬರಬೇಕಾಗುತ್ತದೆ. "ಲಲಾಟದಲ್ಲಿ ವಿಭೂತಿ ಬರಲಿಕೆ ಪಾಪ ಪಲ್ಲಟ

ವಾಗದೆ, ಕೂಡಲಸಂಗಮದೇವಾ" ಎಂದು ಬಸವಣ್ಣನವರು ಹೇಳುತ್ತಾರೆ. ಹೀಗೆ ನಮ್ಮಲ್ಲಿ ಧೈರ್ಯ ತುಂಬುತ್ತಾರೆ. "ಮುನ್ನ ಮಾಡಿದ ಪಾಪವೆಂತು ಹೋಹುದೆಂದು ಚಿಂತಿಸಬೇಡ" ಎಂದು ಅಭಯವಚನವನ್ನು ನೀಡುತ್ತಾರೆ. ವಿಭೂತಿಯು ದೇವರಿಗೆ ಶರಣಾಗತವಾಗುವುದರ ಸಂಕೇತವಾಗಿದೆ. ಕಾಮನೆಗಳಿಂದ ಮುಕ್ತವಾಗಿರುವುದರ ಸಂಕೇತವಾಗಿದೆ. ಎಲ್ಲವೂ ನಶ್ವರ, ನೂರೆಂಟು ಹೆಸರುಗಳಿಂದ ಕರೆಯಿಸಿಕೊಳ್ಳುವ ಈಶ್ವರನೊಬ್ಬನೇ ಶಾಶ್ವತ ಎಂಬುದನ್ನು ಸಾರುತ್ತದೆ.

ಅಂತರಂಗ ಆತ್ಮಶುದ್ಧಿ ಇಲ್ಲದೆ ನಾವು ಒಳ್ಳೆಯವರಾಗಲು ಸಾಧ್ಯವಿಲ್ಲ. ಬರಿ ತೋರಿಕೆಯ ಭಕ್ತಿಯಿಂದ ಯಾವ ಪ್ರಯೋಜನವೂ ಇಲ್ಲ.

**"ಹುತ್ತವ ಬಡೆದೊಡೆ ಹಾವು ಸಾಯಬಲ್ಲುದೆ ಅಯ್ಯಾ?**
**ಅಘೋರ ತಪವ ಮಾಡಿದೊಡೇನು?**
**ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ**
**ಕೂಡಲಸಂಗಮದೇವ?"**

ಎಂದು ಬಸವಣ್ಣನವರು ಪ್ರಶ್ನಿಸುವುದರ ಮೂಲಕ ಎಚ್ಚರಿಸುತ್ತಾರೆ. ನಮ್ಮೊಳಗೆ ಬದಲಾವಣೆಗಳಾಗದಿದ್ದರೆ ಹೊರಗೆ ಬದಲಾವಣೆಗಳಾಗುವುದು ಸಾಧ್ಯವಿಲ್ಲ ಎಂಬುದನ್ನು ಸೂಚಿಸುತ್ತಾರೆ.

**"ಕಾಮವೇಕೊ ಲಿಂಗಪ್ರೇಮಿಯೆನಿಸುವಂಗೆ?**
**ಕ್ರೋಧವೇಕೊ ಶರಣವೇದ್ಯನೆನಿಸುವಂಗೆ?**
**ಲೋಭವೇಕೊ ಭಕ್ತಿಲಾಭವ ಬಯಸುವಂಗೆ?**
**ಮೋಹವೇಕೊ ಪ್ರಸಾದವೇದ್ಯನೆನಿಸುವಂಗೆ?**
**ಮದಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೋ?**
**ಹದುಳಿಗರಾದಲ್ಲಿಪ್ಪ ನಮ್ಮ ಕೂಡಲಸಂಗಮದೇವ."**

ಕಾಮವನ್ನು ಲಿಂಗಪ್ರೇಮಿಯಾಗಿ ಜಯಿಸಬೇಕು. ಶರಣನಾಗಿ ಕ್ರೋಧವನ್ನು ಜಯಿಸಬೇಕು, ಭಕ್ತಿಭಾವ ತಾಳಿ ಲೋಭದಿಂದ ಮುಕ್ತರಾಗಬೇಕು. ಪ್ರಸಾದವನರಿತು ಮೋಹದಿಂದ ಹೊರಬರಬೇಕು. ಶುದ್ಧ ಹೃದಯದಿಂದ ಮದ, ಮತ್ಸರಗಳನ್ನು ಇಲ್ಲವಾಗಿಸಬೇಕು. ಹೀಗೆ ಸಾಧಿಸುವುದರ ಮೂಲಕ ನೆಮ್ಮದಿಯ ಬದುಕನ್ನು ಸಾಗಿಸುವವರ ಜೊತೆ ದೇವರು ಇರುವನು ಎಂದು ಬಸವಣ್ಣನವರು ಹೇಳಿದ್ದಾರೆ. "ನುಡಿಗೆ ತಕ್ಕ ನಡೆಯ ಕಂಡೊಡೆ ಕೂಡಲಸಂಗಮದೇವನೊಳಗಿರ್ಪನಯ್ಯಾ" ಎಂದು ಬಸವಣ್ಣನವರು ತಿಳಿಸಿದ್ದಾರೆ.

"ಲೋಕದ ಡೊಂಕ ನೀವೇಕೆ ತಿದ್ದುವಿರಿ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ;
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ;
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
ಕೂಡಲಸಂಗಮದೇವ."

ನಾವು ನಮ್ಮ ತಪ್ಪನ್ನು ತಿದ್ದಿಕೊಳ್ಳದೆ ಸದಾ ಬೇರೆಯವರ ತಪ್ಪಿನ ಬಗ್ಗೆಯೆ ಮಾತನಾಡುತ್ತಿರುತ್ತೇವೆ. ಅನೇಕ ಶ್ರೀಮಂತರು ತಮ್ಮನ್ನು ತಾವು ತಿದ್ದಿಕೊಳ್ಳುವ ಬದಲು ಊರ ಪಂಚಾಯ್ತಿ ಮಾಡಲು ಹೋಗುತ್ತಾರೆ. ಊರಿಗೇ ಪಿಡುಗಾಗಿ ಬದುಕುತ್ತಾರೆ. ಎಲ್ಲರೂ ಒಳ್ಳೆಯವರಾದರೆ ಯಾರೂ ಯಾರಿಗೂ ಬುದ್ಧಿಹೇಳುವ ಪ್ರಸಂಗ ಬರುವುದಿಲ್ಲ. ಒಳ್ಳೆಯದನ್ನು ಹೇಳುವ ಪ್ರಸಂಗ ಬಂದಾಗ ಹೇಳುವವರು ಮೊದಲು ಒಳ್ಳೆಯವರಾಗಿರ ಬೇಕಾಗುತ್ತದೆ ಎಂಬುದನ್ನು ಬಸವಣ್ಣನವರು ಸೂಚಿಸಿದ್ದಾರೆ.

ಬಸವಣ್ಣವರು ವ್ಯಕ್ತಿ, ಸಮಾಜ, ಜೀವಜಗತ್ತು ಮತ್ತು ಅನಂತವಾದ ವಿಶ್ವವನ್ನು ನೋಡುವ ಕ್ರಮವನ್ನು ತಿಳಿಸಿಕೊಟ್ಟಿದ್ದಾರೆ. ಹೀಗೆ ನಾವು ನಾಲ್ಕು ಪ್ರಕಾರಗಳಲ್ಲಿ ನಮ್ಮನ್ನು ನಾವು ಗುರುತಿಸುತ್ತ ಸಾಗಬೇಕಾಗುತ್ತದೆ. ಆಗ ನಾವು ಯಾರಿಗೂ ಹೊರಗಿನವರಾಗು ವುದಿಲ್ಲ; ಯಾರೂ ನಮಗೆ ಹೊರಗಿನವರಾಗುವುದಿಲ್ಲ.

"ಆತ್ಮಸ್ತುತಿ, ಪರನಿಂದೆಯ ಕೇಳಿಸದಿರಯ್ಯಾ, ನಿಮ್ಮ ಧರ್ಮ" ಎಂದು ಬಸವಣ್ಣ ನವರು ದೇವರಲ್ಲಿ ಬೇಡಿಕೊಳ್ಳುತ್ತಾರೆ. ಆತ್ಮವಿಮರ್ಶೆ ಮತ್ತು ಪರರಿಗೆ ತೋರುವ ಗೌರವಭಾವದಿಂದ ಮಾತ್ರ ಜಗತ್ತಿನಲ್ಲಿ ಶಾಂತಿ ನೆಲೆಸುವುದು. ಇಂಥ ಮನಸ್ಥಿತಿಯೊಂದಿಗೆ ಒಳ್ಳೆಯದನ್ನು ಸಾಧಿಸಬೇಕಾದರೆ ದಾಕ್ಷಿಣ್ಯಕ್ಕೆ ಒಳಗಾಗದೆ ನ್ಯಾಯನಿಷ್ಠುರಿಗಳಾಗಿರ ಬೇಕಾಗುತ್ತದೆ. ಒಳ್ಳೆಯದಕ್ಕಾಗಿ ಲೋಕವಿರೋಧವನ್ನೂ ಕಟ್ಟಿಕೊಳ್ಳಬೇಕಾಗುತ್ತದೆ. ನಮ್ಮ ಬದುಕಿನಲ್ಲಿ ಬದ್ಧತೆ ಇದ್ದರೆ ಇದನ್ನೆಲ್ಲ ಸಾಧಿಸಲು ಸಾಧ್ಯ ಎಂದು ಬಸವಣ್ಣನವರು ಸೂಚಿಸಿದ್ದಾರೆ.

"ನ್ಯಾಯ ನಿಷ್ಠುರಿ; ದಾಕ್ಷಿಣ್ಯಪರ ನಾನಲ್ಲ.
ಲೋಕವಿರೋಧಿ: ಶರಣನಾರಿಗಂಜುವವನಲ್ಲ.
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪೆನಾಗಿ."

ಬಸವಣ್ಣನವರು ಸದಾ ಬಡವರ ಪರವಾಗಿ ನಿಲ್ಲುತ್ತಾರೆ. ಜಗತ್ತಿನ ಬಡವರೆಲ್ಲ ಒಂದಾಗಿ ಹೊಸ ಬದುಕನ್ನು ಸಾಧಿಸಬಲ್ಲರು ಎಂಬುದರ ಮುನ್ಸೂಚನೆಯನ್ನು ಅವರು ನೀಡಿದ್ದಾರೆ.

"ವೇದ ಶಾಸ್ತ್ರ ಆಗಮಂಗಳನೋದಿದವರು ಹಿರಿಯರೆ?
ಕವಿ, ಗಮಕಿ, ವಾದಿ, ವಾಗ್ಮಿಗಳು ಹಿರಿಯರೆ?
ನಟನಿ, ಬಾಣ, ವಿಲಾಸಿ, ಸುವಿದ್ಯವ ಕಲಿತ ಡೊಂಬನೇನು ಕಿರಿಯನೆ?
ಹಿರಿಯತನವಾವುದೆಂದಡೆ: ಗುಣಜ್ಞಾನ,
ಆಚಾರಧರ್ಮ; ಕೂಡಲಸಂಗನ ಶರಣರು ಸಾಧಿಸಿದ ಹಿರಿಯತನ."

ಹೀಗೆ ಬಸವಣ್ಣನವರು ಬಡವರಪರ ನಿಲ್ಲುತ್ತಾರೆ. ಬಡವರಿಗಾಗಿ ಹೊಸ ಧರ್ಮವನ್ನು ಸ್ಥಾಪಿಸುತ್ತಾರೆ. ಎಲ್ಲ ಕಾಯಕಜೀವಿಗಳು ಆತ್ಮಗೌರವ ಮತ್ತು ಗಣಪ್ರಜ್ಞೆಯೊಂದಿಗೆ ಒಂದಾಗಿ ಬದುಕುವಂತೆ ಮಾಡುತ್ತಾರೆ. ಬಡವರೆಂದರೆ ಬಸವಣ್ಣನವರಿಗೆ ಎಲ್ಲಿಲ್ಲದ ಪ್ರೀತಿ. ಅವರ ಹೃದಯ ಶ್ರೀಮಂತಿಕೆಯ ಮುಂದೆ ಎಲ್ಲವೂ ತೃಣಸಮಾನ ಅವರಿಗೆ. ಲೌಕಿಕವಾಗಿ ಬಡರಾದ ಶರಣರು ಅನುಭಾವದಲ್ಲಿ ಬಡತನವನ್ನೇ ಶ್ರೀಮಂತಗೊಳಿಸಿದಂಥವರು. ಬಡತನವನ್ನು ಆಹ್ವಾನಿಸುವಂಥವರು.

"ಮನೆ ನೋಡಾ ಬಡವರು; ಮನ ನೋಡಾ ಘನ.
ಸೋಂಕಿನಲ್ಲಿ ಶುಚಿ; ಸರ್ವಾಂಗ ಕಲಿಗಳು.
ಪಸರಕ್ಕನುವಿಲ್ಲ; ಬಂದ ತತ್ಕಾಲಕ್ಕೆ ಉಂಟು.
ಕೂಡಲಸಂಗನ ಶರಣರು ಸ್ವತಂತ್ರಧೀರರು."

ಕೂಡಲಸಂಗನ ಶರಣರು ವ್ಯಭಿಚಾರಿಗಳಲ್ಲ, ಮನಸ್ಸನ್ನು ಮತ್ತು ಶರೀರವನ್ನು ಹತೋಟಿಯಲ್ಲಿಟ್ಟುಕೊಂಡು ಬದುಕಿನಲ್ಲಿ ಸಾಧನೆ ಮಾಡಿದ ಕಲಿಗಳು. ಇವರು ಸಂಪತ್ತನ್ನು ಕೂಡಿಹಾಕುವವರಲ್ಲ. ಆದರೆ ಅವರ ಮನೆಗೆ ಬಂದ ಅತಿಥಿಗಳು ಸಂತೃಪ್ತಗೊಳ್ಳುವಷ್ಟು ಉಂಟು. ಅವರು ಸ್ವತಂತ್ರರೂ ಧೀರರೂ ಆಗಿದ್ದಾರೆ. ಇಂಥ ಮಾನವರನ್ನು ಸೃಷ್ಟಿಸುವುದೇ ಬಸವಧರ್ಮದ ಉದ್ದೇಶವಾಗಿದೆ.

೧) ದೇವನೊಬ್ಬ ನಾಮ ಹಲವು.
೨) ಸಂಗ್ರಹಬುದ್ಧಿಯಿಂದ ಬದುಕು ಅಸಹನೀಯವಾಗುತ್ತದೆ.
೩) ಮಂಗಳಕರವಾದುದನ್ನು ಜಪಿಸಬೇಕು.
೪) ಪಾಪದಿಂದ ಮುಕ್ತಿ ಪಡೆಯಲು ಪುಣ್ಯದ ದಾರಿ ಹಿಡಿಯಬೇಕು.
೫) ನುಡಿದಂತೆ ನಡೆಯಬೇಕು.
೬) ಅಹಂಕಾರದಿಂದ ಅಧೋಗತಿ.
೭) ದಯೆಯಿಂದ ಲೋಕ ರಕ್ಷಣೆ.
೮) ಭೇದಭಾವದಿಂದ ದುರ್ಗತಿ.

೯) ಕಳಬೇಡ.
೧೦) ಕೊಲಬೇಡ.
೧೧) ಹುಸಿಯ ನುಡಿಯಬೇಡ.
೧೨) ಮುನಿಯಬೇಡ.
೧೩) ಅನ್ಯರಿಗೆ ಅಸಹ್ಯ ಪಡಬೇಡ.
೧೪) ತನ್ನ ಬಣ್ಣಿಸಬೇಡ.
೧೫) ಪ್ರತಿಯಾಗಿ ಹಳಿಯಬೇಡ.
೧೬) ಮಹಿಳೆ ನಮ್ಮ ಸಮಾನ.
೧೭) ದಲಿತ ನಮ್ಮ ಸಮಾನ.
೧೮) ಬಡವರು ನಮ್ಮ ಸಮಾನ.
೧೯) ಮಾನವ ಪವಿತ್ರನಾಗಿರಬೇಕು.
೨೦) ಕಾಯಕ ದಾಸೋಹಿಯಾಗಿರಬೇಕು.

ಬಸವಣ್ಣನವರ ಈ ವಿಶ್ವಸಂದೇಶಗಳನ್ನು ನಮ್ಮ ಜೀವನದಲ್ಲಿ ಪಾಲಿಸಿದರೆ ವಿಶ್ವಮಾನವರಾಗುವೆವು.

●

# ಅರಿದಡೆ ಶರಣ, ಮರೆದಡೆ ಮಾನವ

ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ,
ಭಾಂಡ ಒಂದೆ ಭಾಜನ ಒಂದೆ, ಬೆಳಗೆ ಕನ್ನಡಿ ಎನಿಸಿತ್ತಯ್ಯಾ
ಅರಿದಡೆ ಶರಣ, ಮರೆದಡೆ ಮಾನವ,
ಮರೆಯದೆ ಪೂಜಿಸು ಕೂಡಲಸಂಗನ.

–ಬಸವಣ್ಣನವರು

ಮನ್ ಎಂದರೆ 'ವಿಚಾರ ಮಾಡು' ಎಂದು ಅರ್ಥ. ವಿಚಾರ ಮಾಡುವ ಶಕ್ತಿಯುಳ್ಳವನು ಮಾನವನಾಗುತ್ತಾನೆ. ವಿಚಾರಗಳ ಉತ್ಪತ್ತಿಗೆ ಪ್ರಜ್ಞೆ ಮೂಲವಾಗಿರುತ್ತದೆ. ಪ್ರಜ್ಞೆಗೆ ವಸ್ತು ಮೂಲವಾಗಿರುತ್ತದೆ. ವಸ್ತು ಎಂದರೆ ಇಡೀ ವಿಶ್ವ, ಕಣ್ಣಿಗೆ ಕಾಣುವಂಥವು ಗಳೆಲ್ಲ ವಸ್ತುಗಳೇ. ನಕ್ಷತ್ರ, ಸೂರ್ಯ, ಚಂದ್ರ, ಸಮುದ್ರ, ಅರಣ್ಯ, ಪಶು, ಪಕ್ಷಿ ಮತ್ತು ಮಾನವರು ಹೀಗೆ ಕಣ್ಣಿಗೆ ಕಾಣುವ ಎಲ್ಲವೂ ಮತ್ತು ಎಲ್ಲರೂ ನಿಜವಾದ ಅರ್ಥದಲ್ಲಿ ವಸ್ತುರೂಪದಲ್ಲೇ ಇದ್ದೇವೆ. ವಸ್ತುವಿನಿಂದ ಪ್ರಜ್ಞೆಯು ರೂಪ ತಾಳುತ್ತದೆ. ಆ ಪ್ರಜ್ಞೆಯು ವಿಶ್ವದ ಎಲ್ಲ ವಸ್ತುಗಳನ್ನು ಅವರವರ ಅನುಭವಕ್ಕೆ ತಕ್ಕಂತೆ ಅವರ ಮನದಲ್ಲಿ ಮೂಡಿಸುತ್ತದೆ.

ಹೀಗೆ ಪ್ರಜ್ಞೆಯು ವಸ್ತುಗಳನ್ನು ಗ್ರಹಿಸುವ ಶಕ್ತಿಯಾಗಿದೆ. ಪ್ರಜ್ಞೆಯ ಅಸ್ತಿತ್ವಕ್ಕೆ ವಸ್ತು ಇರಲೇ ಬೇಕು. ವಸ್ತು ಇಲ್ಲದೆ ಮಾನವ ಕಲ್ಪಿಸಲಾರ. ನಿಜವಾದ ಅರ್ಥದಲ್ಲಿ ಕಲ್ಪನೆ ಎಂಬುದು ವಸ್ತು ಅಥವಾ ವಸ್ತುಗಳ ಸಹಾಯದಿಂದಲೇ ಮೂಡುವಂಥದ್ದು. ಸ್ಫಿಂಕ್ಸ್ ಕೆತ್ತಿದ ಶಿಲ್ಪಿ ಸಿಂಹವನ್ನು ಮತ್ತು ಹೆಣ್ಣನ್ನು ನೋಡಿದವನಾಗಿರುತ್ತಾನೆ. ಕರಿಯ ಬಣ್ಣ ಮತ್ತು ಹುಲಿಯ ಹಿನ್ನೆಲೆಯೊಂದಿಗೇನೆ ಕಲಾವಿದ ಕರಿಹುಲಿಯ ಚಿತ್ರವನ್ನು

ಬಿಡಿಸಿರುತ್ತಾನೆ. ಹೆಣ್ಣು ಮತ್ತು ಮತ್ಸ್ಯದ ವಾಸ್ತವದ ಹಿನ್ನೆಲೆ ಇಲ್ಲದೆ ಮತ್ಸ್ಯಕನ್ಯೆ ಮೂಡಿ ಬರಲಾರಳು. ತೆಂಗಿನ ಮರವಿಲ್ಲದೆ ಕಲ್ಪವೃಕ್ಷವಿಲ್ಲ. ಗೋವು ಇಲ್ಲದೆ ಕಾಮಧೇನು ಇಲ್ಲ. ಆನೆ ಇಲ್ಲದೆ ಐರಾವತ ಇಲ್ಲ. ಹೀಗೆ ಮಾನವನ ಕಲ್ಪನೆಯ ಹಿಂದೆ ವಸ್ತುಗಳು ಅಡಕವಾಗಿವೆ.

"ಭಿತ್ತಿ ಇಲ್ಲದೆ ಬರೆಯಬಹುದೆ ಚಿತ್ತಾರವ?" ಎಂದು ಬಸವಣ್ಣನವರು ಪ್ರಶ್ನಿಸುತ್ತಾರೆ. ಭಿತ್ತಿಯಂಥ ಭೌತಿಕ ವಸ್ತುಗಳ ಸಹಾಯವಿಲ್ಲದೆ ಚಿತ್ರಗಳನ್ನು ಬಿಡಿಸಲಿಕ್ಕಾಗದು. ಭಿತ್ತಿಯು ಭೌತಿಕವಾದದ ಪ್ರತೀಕವಾದರೆ, ಚಿತ್ತಾರವು ಅನುಭಾವದ ಪ್ರತೀಕವಾಗಿದೆ. ಭಿತ್ತಿ ಇಲ್ಲದೆ ಚಿತ್ತಾರವಿಲ್ಲ. ಹಾಗೆಯೆ ಅನುಭವವಿಲ್ಲದೆ ಅನುಭಾವವಿಲ್ಲ. ವಸ್ತುವಿನ ಜೊತೆಗಿನ ಅನುಭವದ ಮೂಲಕ ಬರುವ ಪ್ರಜ್ಞೆಯು ಭೌತಿಕವಾದಕ್ಕೆ ಪುಷ್ಟಿ ಕೊಡುತ್ತದೆ. ಅನುಭವದ ಮೂಲಕ ಅನುಭಾವದ ಸೃಷ್ಟಿಯಾದಾಗ ಅರಿವು ಮೂಡುತ್ತದೆ. ಹೀಗೆ ಪ್ರಜ್ಞೆ ಎಂಬುದು ವಸ್ತುವಿನ ಗ್ರಹಿಕೆಯ ಮೂಲಕ ಬಂದರೆ, ಅರಿವು ಎಂಬುದು ವಸ್ತುವಿನ ಮೂಲ ಗ್ರಹಿಕೆಯ ಮೂಲಕ ಬರುವುದು. ಈ ಸತ್ಯವನ್ನು ಅರಿತವನೇ ಶರಣ. ಮರೆತವನೇ ಮಾನವ. ಅಂದರೆ ಗ್ರಹಿಕೆಯು ಸಾಮಾನ್ಯ ಮಾನವನ ಗುಣವಾಗಿದೆ. ವಸ್ತುವಿನ ಮೂಲಕ ಸೃಷ್ಟಿಯಾಗುವ ಪ್ರಜ್ಞೆಯೊಂದಿಗೆ ಭೌತಿಕ ಜೀವನ ಸಾಗುವುದರಲ್ಲಿ ಸಂಶಯವಿಲ್ಲ. ಪ್ರತಿಯೊಬ್ಬ ಮಾನವನು ಸಹಜವಾಗಿಯೆ ಇಂಥ ಪ್ರಜ್ಞೆಯಿಂದ ಬದುಕುತ್ತಾನೆ. ಆದರೆ ನೋಟದಿಂದ ಪ್ರಜ್ಞೆ ಪಡೆಯುವ ಶರಣ ಒಳನೋಟದಿಂದ ಅರಿವು ಪಡೆಯುತ್ತಾನೆ. ಹೀಗೆ ಒಳನೋಟವನ್ನು ಮರೆತವನು ಮಾನವನಾಗಿರುತ್ತಾನೆ. ಆದರೆ ಒಳನೋಟವನ್ನು ಅರಿತವನೇ ಶರಣನಾಗಿರುತ್ತಾನೆ ಎಂಬುದನ್ನು ಬಸವಣ್ಣನವರು ಮಾರ್ಮಿಕವಾಗಿ ಹೇಳಿದ್ದಾರೆ.

ವಸ್ತು ಮತ್ತು ಮೂಲವಸ್ತುವಾದ ಚೈತನ್ಯ ಬೇರೆ ಬೇರೆ ಅಲ್ಲ. ಮ್ಯಾಟರ್ ಮತ್ತು ಎನರ್ಜಿ ಬೇರೆ ಬೇರೆ ಅಲ್ಲ ಎಂಬುದು ಇದರ ಅರ್ಥ. ವಿಜ್ಞಾನದ ಎನರ್ಜಿ ತತ್ತ್ವಜ್ಞಾನ ದಲ್ಲಿ ಸ್ಪಿರಿಟ್ ಎನಿಸಿಕೊಳ್ಳುತ್ತದೆ. ಮ್ಯಾಟರ್ ಎಂಬುದು ವಸ್ತುವಾದರೆ ಮೂಲವಸ್ತು ಎಂಬುದೇ ಎನರ್ಜಿ ಅಥವಾ ಸ್ಪಿರಿಟ್. ಮೂಲವಸ್ತುವಾದ ಚೈತನ್ಯದಿಂದಲೇ ವಸ್ತುವಿನ ನಿರ್ಮಾಣವಾಗಿದೆ ಎಂಬುದರ ಕುರಿತು ಬಸವಣ್ಣನವರು ತಿಳಿಸಿದ್ದಾರೆ. ಇದನ್ನು ಅರಿತವನೇ ಶರಣನಾಗುತ್ತಾನೆ. ಈ ಜ್ಞಾನವಿಲ್ಲದವನು ಬರಿ ಮಾನವನಾಗಿ ಭೌತಿಕ ವಸ್ತುಗಳ ಜೊತೆಗೆ ಜೀವನ ಸಾಗಿಸುತ್ತಾನೆ.

"ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ, ಭಾಂಡ ಒಂದೆ ಭಾಜನ ಒಂದೆ, ಬೆಳಗೆ ಕನ್ನಡಿ ಎನಿಸಿತ್ತಯ್ಯಾ" ಎಂದು ಬಸವಣ್ಣನವರು

ತಿಳಿಸಿದ್ದಾರೆ. ಉಣ್ಣುವ ಗಂಗಾಳವನ್ನು ಕಂಚಿನಿಂದ ಮಾಡುತ್ತಾರೆ. ಮುಖ ನೋಡಿಕೊಳ್ಳುವ ಕನ್ನಡಿಯನ್ನು ಕೂಡ ಕಂಚಿನಿಂದಲೇ ತಯಾರಿಸುತ್ತಾರೆ. ಹೀಗೆ ಉಣ್ಣುವ ಗಂಗಾಳ ಮತ್ತು ಮುಖ ನೋಡಿಕೊಳ್ಳುವ ಕನ್ನಡಿ ಬೇರೆ ಬೇರೆ ವಸ್ತುಗಳಾದರೆ. ಮೂಲ ವಸ್ತುವಾದ ಕಂಚು ಒಂದೇ ಆಗಿದೆ. ಅಡುಗೆ ಮಾಡುವ ಪಾತ್ರೆಯನ್ನು ಕಂಚಿನಿಂದಲೇ ತಯಾರಿಸುತ್ತಾರೆ. ಅದೇ ರೀತಿ ಊಟದ ಗಂಗಾಳವನ್ನು ಕೂಡ ಕಂಚಿನಿಂದಲೇ ತಯಾರಿಸುತ್ತಾರೆ. ಅದೇ ಕಂಚಿನ ತುಕಡಿಯನ್ನು ತಿಕ್ಕಿ ತಿಕ್ಕಿ ನುಣುಪುಗೊಳಿಸಿ ಕನ್ನಡಿ ತಯಾರಿಸುತ್ತಾರೆ. ಹೀಗೆ ಮೂಲವಸ್ತುವಾದ ಕಂಚು ವಿವಿಧ ರೀತಿಯ ರೂಪು ಪಡೆಯುವುದರ ಮೂಲಕ ಅಡುಗೆ ಪಾತ್ರೆ, ಊಟದ ಗಂಗಾಳ ಮತ್ತು ಮುಖ ನೋಡಿಕೊಳ್ಳುವ ಕನ್ನಡಿಯಾಗುತ್ತದೆ.

ಈ ರೀತಿ ಜಗತ್ತು ರೂಪುಗೊಳ್ಳುವ ಕ್ರಮವನ್ನು ಬಸವಣ್ಣನವರು ಅರುಹಿದ್ದಾರೆ. ಬಸವಣ್ಣನವರ ಸಿದ್ಧಾಂತ ಬಯಲು ಸಿದ್ಧಾಂತವಾಗಿದೆ. ಬಯಲಿನಿಂದ ಸೃಷ್ಟಿಯಾದುದು ಬಯಲಲ್ಲೇ ಲಯವಾಗುತ್ತದೆ. ಬಯಲು ಎಂಬುದೇ ಮೂಲವಸ್ತು. ಈ ಬಯಲನ್ನು ಶೂನ್ಯ ಅಥವಾ ಚೈತನ್ಯ ಎಂದೂ ಕರೆಯುತ್ತಾರೆ. ಇದುವೆ ಸ್ಪಿರಿಟ್ ಅಥವಾ ಎನರ್ಜಿ. ಈ ಮೂಲವಸ್ತುವಿನಿಂದಲೇ ನಕ್ಷತ್ರಗಳು, ಸೂರ್ಯ, ಚಂದ್ರ, ಪೃಥ್ವಿ ಮುಂತಾದ ಆಕಾಶಕಾಯಗಳ ನಿರ್ಮಾಣವಾಗಿದೆ. ಮಾನವರು, ಪ್ರಾಣಿ, ಪಕ್ಷಿ, ಕ್ರಿಮಿ, ಕೀಟ, ಗಿಡಮರಬಳ್ಳಿಗಳು, ನದಿ ಮತ್ತು ಸಮುದ್ರಗಳು ಹೀಗೆ ಪೃಥ್ವಿಯಲ್ಲಿ ಕಾಣುವುದೆಲ್ಲವೂ ಪೃಥ್ವಿಯಿಂದಲೇ ಜನ್ಮ ತಾಳಿದ್ದಾಗಿರುತ್ತವೆ. ಆದರೆ ಪೃಥ್ವಿ ಸಮೇತ ಇಡೀ ವಿಶ್ವವು ಬಯಲೆಂಬ ಚೈತನ್ಯದಿಂದ ಸೃಷ್ಟಿಯಾಗಿದೆ. ಸೂರ್ಯ, ಚಂದ್ರ ತಾರೆಗಳ ಸಮೇತ ಕಾಣುವುದೆಲ್ಲವೂ ಒಂದಿಲ್ಲ ಒಂದು ದಿನ ಲಯವಾಗಿ ಮೂಲವಸ್ತುವಾದ ಚೈತನ್ಯದಲ್ಲಿ ಒಂದಾಗಲೇ ಬೇಕು. ಇದನ್ನು ಅರಿತವನೇ ಶರಣ. ಮರೆತವನೇ ಮಾನವ. ಆದ್ದರಿಂದಲೇ "ಮರೆಯದೆ ಪೂಜಿಸು ಕೂಡಲಸಂಗನ" ಎಂದು ಬಸವಣ್ಣನವರು ಹೇಳಿದ್ದಾರೆ. ಬಸವಣ್ಣನವರ ಪೂಜೆಯು ಮೂಲವಸ್ತುವನ್ನು ಅರಿತುಕೊಳ್ಳುವ ಕ್ರಮವಾಗಿದೆ.

"ಬಯಲ ರೂಪ ಮಾಡಬಲ್ಲಾತನೆ ಶರಣನು;
ಆ ರೂಪ ಬಯಲು ಮಾಡಬಲ್ಲಾತನೆ ಲಿಂಗಾನುಭಾವಿ.
ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ?
ಆ ರೂಪ ಬಯಲ ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿ ಎಂಬೆ?
ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರಹುಂಟೆ
ಕೂಡಲಸಂಗಮದೇವಾ."

ಎಂದು ಬಸವಣ್ಣನವರು ಹೇಳುವಲ್ಲಿ ಈ ಅರಿವಿನ ವಿರಾಟ ಸ್ವರೂಪವನ್ನು ತೋರಿಸಿಕೊಟ್ಟಿದ್ದಾರೆ. ಚೈತನ್ಯದಿಂದ ವಸ್ತುವಾಗಿರುವುದನ್ನು ಅರಿತವನೇ ಶರಣ. ಆ ವಸ್ತು ಲಯವಾಗಿ ಮತ್ತೆ ಚೈತನ್ಯವಾಗುತ್ತದೆ ಎಂಬುದನ್ನು ಅರಿತವನೇ ಲಿಂಗತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡ ಲಿಂಗಾನುಭಾವಿ. ಚೈತನ್ಯವನ್ನು ವಸ್ತುರೂಪದಲ್ಲಿ ಕಂಡುಕೊಂಡು ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವಾತನೇ ಶರಣ. ಶಿವ ಎಂಬುದೇ ಚೈತನ್ಯ. ಆ ಚೈತನ್ಯದಿಂದ ರೂಪ ತಳೆದ ಸಕಲ ಜೀವಾತ್ಮರು ಶಿವಸ್ವರೂಪಿಗಳೇ ಆಗಿದ್ದಾರೆ. ಆದ್ದರಿಂದ ಲೋಕದಲ್ಲಿ ಸರ್ವಸಮತ್ವವನ್ನು ಅರಿತವನು ಶರಣ ಎಂದು ಕರೆಯಿಸಿಕೊಳ್ಳುವನು. ಆತ ಹೀಗೆ ಬದುಕನ್ನು ಅರ್ಥೈಸಿಕೊಳ್ಳದಿದ್ದರೆ ಅವನಿಗೆ ಶರಣನೆಂದು ಕರೆಯಲಿಕ್ಕಾಗದು. ಈ ವಿಶ್ವ ಮತ್ತೆ ತನ್ನ ರೂಪವನ್ನು ಕಳೆದುಕೊಂಡು ಬಯಲಾಗುವುದು ಎಂಬ ಅಂತಿಮ ಸತ್ಯವನ್ನು ಅರಿತ ಶರಣನೇ ಲಿಂಗಾನುಭಾವಿಯಾಗುತ್ತಾನೆ. ಲಿಂಗತತ್ತ್ವವು ವಿಶ್ವದ ಆದಿ ಮತ್ತು ಅಂತ್ಯದ ಪರಿಜ್ಞಾನವನ್ನು ಕೊಡುವ ತತ್ತ್ವವಾಗಿದೆ. ಇವುಗಳ ಮಧ್ಯೆ ಇರುವ ಬದುಕನ್ನು ಲಿಂಗಾಂಗ ಸಾಮರಸ್ಯದೊಂದಿಗೆ ಅರ್ಥಪೂರ್ಣಗೊಳಿಸುವ ಕ್ರಮವನ್ನು ಲಿಂಗತತ್ತ್ವ ಸಾರುತ್ತದೆ. ಲಿಂಗವೇ ಚೈತನ್ಯ. ಅಂಗವೇ ನಮ್ಮ ದೇಹ ಎಂಬ ವಸ್ತು. ಇವುಗಳ ಮಧ್ಯದ ಅಂದರೆ ಶಿವ ಮತ್ತು ಜೀವರ ಮಧ್ಯದ ಸಾಮರಸ್ಯವೇ ಲಿಂಗಾಂಗ ಸಾಮರಸ್ಯ. ಹೀಗೆ ಲಿಂಗಾಂಗ ಸಾಮರಸ್ಯ ಹೊಂದಿದವರು ಪ್ರಸಾದಕಾಯರಾಗುತ್ತಾರೆ. ಇಂಥ ಲಿಂಗಾಂಗ ಸಾಮರಸ್ಯವನ್ನು ಹೊಂದಿದವರೇ ಲಿಂಗಾನುಭಾವಿಗಳು. ಎಲ್ಲವೂ ಲಯವಾಗುವ ಅಂತಿಮ ಸತ್ಯವನ್ನು ಅರಿಯಲು ಲಿಂಗಾಂಗಸಾಮರಸ್ಯ ಅವಶ್ಯವಾಗಿದೆ. ರೂಪ ಲಯವಾಗಿ ಬಯಲಾಗುವ ಅಂತಿಮ ಸತ್ಯವನ್ನು ಅರಿಯದವರು ಲಿಂಗಾನುಭಾವಿಗಳಾಗಲು ಸಾಧ್ಯವಿಲ್ಲ. ಇಂಥ ಬಯಲು ಮತ್ತು ರೂಪ ಒಂದಾಗಿರುವುದನ್ನು ಅರಿತುಕೊಂಡಾಗ ಶಿವ ಮತ್ತು ಜೀವರಲ್ಲಿ ಅಭೇದ್ಯ ಉಂಟಾಗುವುದು. ಈ ಸತ್ಯವನ್ನು ಅರಿತುಕೊಂಡವರು ಶರಣರಾಗುತ್ತಾರೆ; ಮರೆತವರು ಮಾನವರಾಗಿ ಸುಮ್ಮನೆ ಬದುಕಿ ಸತ್ತುಹೋಗುತ್ತಾರೆ.

●

# ಕಾಯಕವೇ ಕೈಲಾಸ

**ಕಾಯಕದಲ್ಲಿ ನಿರತನಾದಡೆ, ಗುರುದರ್ಶನವಾದಡೂ ಮರೆಯಬೇಕು,**
**ಲಿಂಗಪೂಜೆಯಾದಡೂ ಮರೆಯಬೇಕು,**
**ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು.**
**ಕಾಯಕವೇ ಕೈಲಾಸವಾದ ಕಾರಣ.**
**ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು.**

**– ಆಯ್ದಕ್ಕಿ ಮಾರಯ್ಯ**

ಶರಣದರ್ಶನದಲ್ಲಿ ದಾಸೋಹಂಭಾವದ ಕಾಯಕಕ್ಕೆ ಹೆಚ್ಚಿನ ಮಹತ್ವವಿದೆ. ಬೆಳಕು ಕೊಡುವುದು ಸೂರ್ಯನ ಕಾಯಕ, ಬೆಳದಿಂಗಳನ್ನು ತರುವುದು ಚಂದ್ರನ ಕಾಯಕ, ಹೊಳೆಯುವುದು ತಾರೆಗಳ ಕಾಯಕ, ಸೃಷ್ಟಿಕ್ರಿಯೆ ಭೂಮಿಯ ಕಾಯಕ, ಜೀವಜಾಲದ ಕೊಂಡಿಗಳಾಗುವುದು ಪಶು ಪಕ್ಷಿಗಳ ಕಾಯಕ. ಪರಾಗಸ್ಪರ್ಶ ಕೀಟಗಳ ಕಾಯಕ. ಈ ಎಲ್ಲವುಗಳ ಕಾಯಕದ ಪರಿಣಾಮ ನಮಗೆ ದಾಸೋಹ ರೂಪದಲ್ಲಿ ಸಿಗುತ್ತದೆ. ಇವು ನಿಷ್ಕ್ರಿಯವಾದರೆ ಲೋಕ ನಿರ್ನಾಮವಾಗುವುದು. ಕಾಯಕ ದಾಸೋಹ ನಿಸರ್ಗ ತತ್ತ್ವಗಳಾಗಿವೆ. ಮಾನವನು ನಿಸರ್ಗದ ಭಾಗವಾಗಿದ್ದಾನೆ. ಆದ್ದರಿಂದ ಆತ ಕಾಯಕ ಮತ್ತು ದಾಸೋಹ ಬಿಟ್ಟು ಬದುಕುವಂತಿಲ್ಲ ಎಂದು ಬಸವಧರ್ಮ ಸಾರುತ್ತದೆ.

ಸತಿ ಆಯ್ದಕ್ಕಿ ಲಕ್ಕಮ್ಮಳಿಂದ ಆಯ್ದಕ್ಕಿ ಮಾರಯ್ಯನವರು ಕಾಯಕದ ಮಹತ್ವ ಅರಿತರು. ಈ ಕಡುಬಡವ ದಂಪತಿಯ ಮಧ್ಯೆ ಅನ್ಯೋನ್ಯತೆ, ವೈಚಾರಿಕ ಸ್ವಾತಂತ್ರ್ಯ, ನ್ಯಾಯನಿಷ್ಠುರತೆ, ಸಾಮರಸ್ಯ ಮತ್ತು ಏಕೋಭಾವವಿತ್ತು. ಸತಿ ಲಕ್ಕಮ್ಮನ ಜ್ಞಾನಕ್ಕೆ ಪತಿ ಮಾರಯ್ಯ ಬೆಲೆ ಕೊಟ್ಟರು. ಆ ಜ್ಞಾನವನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡರು.

ಅಂತೆಯೆ ಅವರಿಗೆ ಇಂಥ ಮಹತ್ವದ ವಚನವನ್ನು ಬರೆಯಲಿಕ್ಕೆ ಸಾಧ್ಯವಾಯಿತು. ಇಡೀ ಶರಣಸಂಕುಲದ ಹೆಮ್ಮೆಯ ವಚನ ಇದಾಗಿದೆ.

ನಿಸರ್ಗಪರವಾದ ಕಾಯಕದ ಮೇಲೆ ನಿಂತ ಬಸವದರ್ಶನವನ್ನು ಮಾರಯ್ಯನವರು ಅಪ್ಪಿಕೊಂಡರು. ಕಾಯಕವೇ ಎಲ್ಲದಕ್ಕೂ ಆಧಾರ. ಕಾಯಕವಿಲ್ಲದಿದ್ದರೆ ಇಡೀ ಲೋಕ ನಿಷ್ಕ್ರಿಯವಾಗುವುದರಿಂದ ಗುರು, ಲಿಂಗ ಮತ್ತು ಜಂಗಮರು ಆಧಾರವಿಲ್ಲದಂತಾಗುತ್ತಾರೆ. ಈ ಹಿನ್ನೆಲೆಯಲ್ಲಿ ಇದೊಂದು ವಿಶಿಷ್ಟ ವಚನವಾಗಿದೆ. ಅವರು ಗುರು, ಲಿಂಗ ಮತ್ತು ಜಂಗಮರ ಅವಹೇಳನ ಮಾಡುವುದಿಲ್ಲ. ಆದರೆ ಗುರು, ಲಿಂಗ, ಜಂಗಮರ ಹಾಗೂ ಒಟ್ಟಾರೆ ಸಕಲ ಜೀವಾತ್ಮರ ಸಂರಕ್ಷಣೆಗಾಗಿ ಕಾಯಕ ಎಷ್ಟೊಂದು ಮಹತ್ವದ್ದಾಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ಮಾತ್ರ ಅವರು ಈ ಸ್ಪಷ್ಟ ವಾದವನ್ನು ಮುಂದಿಡುತ್ತಾರೆ.

ನಾವು ಕಾಯಕದಲ್ಲಿ ಮಗ್ನವಾದಾಗ ದೇವರಿಗೆ ಪ್ರಿಯವಾದುದನ್ನೇ ಮಾಡುತ್ತ ಸ್ವಾವಲಂಬಿಯಾಗುತ್ತೇವೆ. ನಂತರ ದಾಸೋಹದ ಮೂಲಕ ಅಳಿಲುಸೇವೆ ಸಲ್ಲಿಸುತ್ತೇವೆ. ಕಾಯಕ ನಿರತರಾದಾಗ ಗುರುದರ್ಶನ, ಲಿಂಗಪೂಜೆ ಮತ್ತು ಜಂಗಮಸೇವೆಯ ಯೋಚನೆ ಮಾಡಬಾರದು. ಏಕೆಂದರೆ ಕಾಯಕದ ಪರಿಣಾಮವು ಗುರು ಲಿಂಗ ಜಂಗಮಕ್ಕಾಗಿಯೇ ಇದೆ ಎಂಬ ಸೂಕ್ಷ್ಮತೆಯನ್ನು ಈ ವಚನ ಹೊಂದಿದೆ. ಗುರು ಲಿಂಗ ಜಂಗಮ ಮತ್ತು ಸ್ವರ್ಗಸಮಾನವಾದ ಬದುಕಿನ ಒಳ್ಳೆಯದೆಲ್ಲ ಆ ಕಾಯಕದೊಳಗೇ ಇದೆ ಎಂಬ ಭಾವವನ್ನು ಈ ವಚನ ಸೂಚಿಸುತ್ತದೆ. ಅಂತೆಯೆ 'ಕಾಯಕವೇ ಕೈಲಾಸ' ಎಂಬುದು ಬಸವಧರ್ಮದ ಘೋಷವಾಕ್ಯವಾಗಿ ಅಂದರೆ ಮಹಾವಾಕ್ಯವಾಗಿ ಜನಮನದಲ್ಲಿ ಅಚ್ಚೊತ್ತಿದೆ.

'ಕಾಯಕವೇ ಕೈಲಾಸವಾದ ಕಾರಣ ದೇವರು ಕಾಯಕದೊಳಗೇ ಇರುತ್ತಾನೆ' ಎಂಬ ಮಾತು ಕಾಯಕದ ಬಗೆಗೆ ಶರಣರಿಗಿರುವ ಗೌರವದ ಪ್ರತೀಕವಾಗಿದೆ. ಶರಣರು ಕಾಯಕದ ಮೂಲಕ ದೇವರನ್ನು ಕಂಡರು. ಕಾಯಕದ ಅನುಭವವನ್ನೇ ಮೆಟ್ಟಿಲಾಗಿಸಿಕೊಂಡು ಅನುಭಾವದ ತುದಿಯನ್ನು ತಲುಪಿದರು. ಆದರೆ ನಮ್ಮ ದೇಶದ ಧರ್ಮಶಾಸ್ತ್ರಗಳು ಅಧ್ಯಾತ್ಮಕ್ಕೂ ಕಾಯಕಕ್ಕೂ ಸಂಬಂಧವನ್ನು ಕಲ್ಪಿಸಲೇ ಇಲ್ಲ. ಸಾಧುಗಳು, ಸನ್ಯಾಸಿಗಳು, ಸ್ವಾಮಿಗಳು, ಯೋಗಿಗಳು ಮತ್ತು ಯತಿಗಳು ಆಗುವುದೆಂದರೆ ಕಾಯಕದಿಂದ ದೂರಾಗುವುದು ಎಂದೇ ಅರ್ಥ. ದೊಡ್ಡ ದೊಡ್ಡ ತತ್ತ್ವಜ್ಞಾನದ ಮಾತುಗಳನ್ನು ಹೇಳುತ್ತ ಪರಾವಲಂಬಿಗಳಾಗಿ ಬದುಕುವುದು ಎಂದೇ ಅರ್ಥ. ಹೀಗೆ ನಿಷ್ಕ್ರಿಯ ಬದುಕನ್ನು ಸಾಗಿಸುವವರು ಜ್ಞಾನವನ್ನು ಕ್ರಿಯೆಗೆ ಇಳಿಸುವಲ್ಲಿ ಸೋತರು. ಉಪದೇಶ

ಮಾಡುವುದೇ ಇವರ ಕಾಯಕವಾಯಿತು. ಇಂಥವರಲ್ಲಿ ಅನೇಕರು ಸಾತ್ವಿಕರೂ ಧರ್ಮ ಭೀರುಗಳೂ ಇದ್ದರು. ಆದರೆ ಅವರಲ್ಲಿನ ಕೆಲವರು, ರಾಜರಿಗಿರುವ ಸೌಲಭ್ಯಗಳನ್ನು ಕೂಡ ಪಡೆಯುವಲ್ಲಿ ಸಫಲರಾದರು. ಬೆಳ್ಳಿಯ ಪಲ್ಲಕ್ಕಿ, ನವರತ್ನಗಳಿಂದ ಕೂಡಿದ ಬಂಗಾರದ ಕಿರೀಟ, ಆನೆ, ಅಂಬಾರಿ, ಕುದುರೆ, ರಥ ಮತ್ತು ನೂರಾರು ಸೇವಕರನ್ನು ಹೊಂದಿ ಭಾರಿ ಮಠಮಾನ್ಯಗಳ ಒಡೆಯರಾಗಿದ್ದರು. ಕಳ್ಳರು, ಸುಳ್ಳರು, ದರೋಡೆ ಕೋರರು, ಮೋಸಗಾರರು, ಕೊಲೆಗಡುಕರು, ಸುಲಿಗೆಕೋರರು, ಶ್ರೀಮಂತರು, ರಾಜ ಮಹಾರಾಜರು ಹೀಗೆ ಈ ಎಲ್ಲ ಪ್ರಕಾರದ ಜನರು ಇವರ ಮಾತುಗಳಿಗೆ ಮರಳಾಗುತ್ತಲೇ ಇದ್ದುದಕ್ಕೆ ಇತಿಹಾಸ ಸಾಕ್ಷಿ ಇದೆ. ನಿತ್ಯ ಜೀವನದಲ್ಲಿ ತಪ್ಪು ಮಾಡುತ್ತಲೇ ಇರುವ ಇಂಥವರಿಗೆ ಈ 'ತ್ರಿಕಾಲ' ಜ್ಞಾನಿಗಳು ನರಕದ ಭಯವನ್ನು ಹುಟ್ಟಿಸುತ್ತಿದ್ದರು. ಅವರ ಕರ್ಮ ಹರಿಯಲು ಯಜ್ಞಯಾಗಾದಿಗಳನ್ನು ಮಾಡಿಸುತ್ತಿದ್ದರು. ಸ್ವರ್ಗದ ಆಸೆಯನ್ನು ಹಚ್ಚುವುದರ ಮೂಲಕ ಅವರಿಂದ ಭಾರಿ ಮೊತ್ತದ ಧನಕನಕ ಮತ್ತು ಆಸ್ತಿಪಾಸ್ತಿ ಪಡೆಯುತ್ತಿದ್ದರು. ಕಾಯಕಜೀವಿಗಳು ಇಂಥ 'ಮಹಾತ್ಮರ' ಬಿಟ್ಟಿ ಸೇವೆ ಮಾಡುತ್ತ ಪುಣ್ಯ ಲಭಿಸುವುದೆಂಬ ಭ್ರಮೆಯಲ್ಲಿ ಬದುಕುತ್ತಿದ್ದರು.

ಸೂಕ್ಷ್ಮಮತಿಗಳಾದ ಬಸವಣ್ಣನವರು ಇದನ್ನೆಲ್ಲ ಗಮನಿಸಿದರು. ಬಹುಸಂಖ್ಯಾತ ರಾದ ಕಾಯಕಜೀವಿಗಳ ಶೋಷಣೆಯನ್ನು ಎಲ್ಲರೂ ಒಂದಾಗಿ ಮಾಡುತ್ತಿರುವುದನ್ನು ತಪ್ಪಿಸುವುದೇ ಅವರ ಆದ್ಯ ಕರ್ತವ್ಯವಾಗಿತ್ತು. ಕಾಯಕಜೀವಿಗಳನ್ನು ಒಂದು ಸಂಕುಲ ವಾಗಿಸಿ, ಅವರನ್ನು ವೈಚಾರಿಕ ನೆಲೆಗೆ ತರಲು ನಿರ್ಧರಿಸಿದರು. ಸುಲಿಗೆಯ ಕೇಂದ್ರಗಳಾದ ಗುಡಿಗಳಿಂದ, ಮೂರ್ತಿಗಳಿಂದ ತೀರ್ಥಕ್ಷೇತ್ರಗಳಿಂದ, ಶಾಸ್ತ್ರಗಳಿಂದ, ಕರ್ಮಸಿದ್ಧಾಂತ ಮತ್ತು ಪಂಚಾಂಗಗಳಿಂದ ಮತ್ತು ಎಲ್ಲ ತೆರನಾದ ಮೂಢನಂಬಿಕೆಗಳಿಂದ ಅವರನ್ನು ಮುಕ್ತಗೊಳಿಸಿ ಕಾಯಕ ಪ್ರಧಾನವಾದ ಜೀವನಮಾರ್ಗವನ್ನು ತೋರಿಸುವಂಥ ಹೊಸ ಧರ್ಮವನ್ನೇ ಜಾರಿಗೆ ತಂದರು. ಈ ಹೊಸ ಧರ್ಮವು ಅರಿವು ಆಚಾರದ ಧರ್ಮ ವಾಗಿತ್ತು. ದುಡಿಯುವವರಿಗೆ ಸಮಾಜದಲ್ಲಿ ಉನ್ನತ ಸ್ಥಾನ ಕೊಡುವ ಧರ್ಮವಾಗಿತ್ತು. ದುಡಿಯುವ ವರ್ಗದಲ್ಲಿ ಜಾತಿ, ಅಸ್ಪೃಶ್ಯತೆ ಮುಂತಾದ ಮೇಲು ಕೀಳುಗಳನ್ನು ನಿವಾರಿಸಿದ ಧರ್ಮವಾಗಿತ್ತು.

ಇಂಥ ಅನುಪಮ ಧರ್ಮದಿಂದ ಕಾಯಕಜೀವಿಗಳು ಪುಳಕಿತಗೊಂಡರು. ಕಾಯಕಕ್ಕಿಂತ ದೊಡ್ಡದು ಯಾವುದೂ ಇಲ್ಲ ಎಂಬ ಸತ್ಯವನ್ನು ಅವರು ಅರಿತರು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮುಂತಾದ ಸವರ್ಣೀಯರು ಸುಖದಿಂದ ಬದುಕು ತ್ತಿರುವುದು ತಮ್ಮ ಕಾಯಕದ ಕಾರಣದಿಂದಲೇ ಎಂಬುದು ಅವರಿಗೆ ಮನವರಿಕೆ ಯಾಯಿತು. ಇಂಥ ಅರಿವಿನ ಹಿನ್ನೆಲೆಯಲ್ಲಿ ಮೂಡಿಬಂದ ವಚನವಿದು.

ಆಯ್ದಕ್ಕಿ ಮಾರಯ್ಯನವರಿಗೆ ಎಂಥ ಆತ್ಮವಿಶ್ವಾಸ ಮೂಡಿದೆ ಎಂದರೆ, ಅವರು ಕಾಯಕದಲ್ಲಿ ನಿರತರಾದಾಗ ಗುರುವಿನ ದರ್ಶನ, ಲಿಂಗಪೂಜೆ ಮತ್ತು ಜಂಗಮ ಸೇವೆಯನ್ನು ಕೂಡ ಮರೆಯಲು ಸಿದ್ಧರಿದ್ದಾರೆ. ಕಾಯಕದಲ್ಲೇ ಕೈಲಾಸವನ್ನು ಮತ್ತು ಆ ಕೈಲಾಸದಲ್ಲಿರುವ ದೇವರನ್ನೂ ಕಾಣುವ ಒಳನೋಟವನ್ನು ಅವರು ಹೊಂದಿದ್ದಾರೆ.

ಹೀಗೆ ಬಸವಣ್ಣನವರು ದುಡಿಯುವ ಜನರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿದರು. ಪರಾವಲಂಬಿಗಳ ಅಧ್ಯಾತ್ಮವನ್ನು ಅಲ್ಲಗಳೆದರು. ಕಾಯಕದ ಅನುಭವದಿಂದ ಮಾತ್ರ ಪರಮಾತ್ಮನ ಅನುಭಾವವಾಗುವುದು ಎಂಬುದನ್ನು ಅವರಿಗೆ ಹೇಳಿಕೊಟ್ಟರು. ಹೀಗೆ ಬಸವಣ್ಣನವರು ದುಡಿಯುವ ವರ್ಗವನ್ನು ವಿಮೋಚನೆಗೊಳಿಸಿದರು.

●

---

ಅಮೆರಿಕದ ಕ್ಯಾಲಿಫೋರ್ನಿಯಾ ರಾಜ್ಯದ ಪಾಲೊ ಅಲ್ಟೊ ನಗರದಲ್ಲಿ ೨೦೧೨ನೇ ಜುಲೈ ೬ ರಿಂದ ೮ರ ವರೆಗೆ ನಡೆದ ೩೫ನೇ ವೀರಶೈವ ಸಮಾಜ ಆಫ್ ನಾರ್ತ್ ಅಮೆರಿಕಾ (ವಿ.ಎಸ್.ಎನ್.ಎ) ಸಮಾವೇಶದಲ್ಲಿ ಮುಖ್ಯ ಅತಿಥಿಯಾಗಿ ಮಾಡಿದ ಭಾಷಣ.

# ನಡೆ ನುಡಿ ಸಿದ್ಧಾಂತ

ನಡೆನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆ ಸೂತಕವಿಲ್ಲ.
ನುಡಿ ಲೇಸು ನಡೆಯಧಮವಾದಲ್ಲಿ,
ಅದು ಬಿಡುಗಡೆಯಿಲ್ಲದ ಹೊಲೆ.
ಕಳವು ಪಾರದ್ವಾರಂಗಳಲ್ಲಿ ಹೊಲಬನರಿಯದೆ,
ಕೆಟ್ಟು ನಡೆವುತ್ತ, ಮತ್ತೆ ಕುಲಜರೆಂಬ ಒಡಲವರುಂಟೆ?
ಆಚಾರವೆ ಕುಲ, ಅನಾಚರವೆ ಹೊಲೆ.
ಇಂತೀ ಉಭಯವ ತಿಳಿದರಿಯಬೇಕು.
ಕೈಯುಳಿಕತ್ತಿ ಅಡಿಗೂಂಟಕ್ಕೆ ಅಡಿಯಾಗಬೇಡ,
ಅರಿ ನಿಜಾತ್ಮಾರಾಮನಾ.

–ಮಾದಾರ ಚೆನ್ನಯ್ಯ

ಮೂಲತಃ ಚೋಳದೇಶದ ಮಾದಾರ ಚೆನ್ನಯ್ಯನವರು ಕರಿಕಾಲ ಚೋಳರಾಜನ ಕುದುರೆಗಳಿಗೆ ಹುಲ್ಲು ಹಾಕುವ ಕಾಯಕ ಮಾಡುತ್ತಿದ್ದರು. ಬಸವಣ್ಣನವರ ಮಹಿಮೆಯನ್ನು ಅರಿತು ಕಲ್ಯಾಣಕ್ಕೆ ಬಂದು ಪಾದರಕ್ಷೆ ತಯಾರಿಸುವ ತಮ್ಮ ಮನೆತನದ ಕಾಯಕವನ್ನು ಆರಂಭಿಸಿದರು. 'ಕೈಯುಳಿಕತ್ತಿ ಅಡಿಗೂಂಟಕ್ಕೆ ಅಡಿಯಾಗಬೇಡ ಅರಿ ನಿಜಾತ್ಮಾರಾಮನಾ.' ಎಂದು ತಮ್ಮ ಕಾಯಕಕ್ಕೆ ಸಂಬಂಧಿಸಿದ ವಸ್ತುಗಳೊಂದಿಗೆ ವಚನಾಂಕಿತವನ್ನು ರೂಪಿಸಿದ್ದು ಇವರ ವೈಶಿಷ್ಟ್ಯ. ನಾವು ಕಾಯಕನಿಷ್ಠೆಯನ್ನು ಹೊಂದಬೇಕು. ಆದರೆ ಅಷ್ಟಕ್ಕೇ ತೃಪ್ತರಾಗದೆ, ಆ ಕಾಯಕದ ಮೂಲಕ ನಮ್ಮೊಳಗಿರುವ ನಿಜವಾದ ಆತ್ಮಾರಾಮನನ್ನು ಅರಿಯಬೇಕು ಎಂಬುದು ಮಾದಾರ ಚೆನ್ನಯ್ಯನವರ ಆಶಯವಾಗಿದೆ.

ಅರಿವು ಮತ್ತು ಪ್ರಜ್ಞೆ ಶಬ್ದಗಳನ್ನು ಶರಣರು ವೈಶಿಷ್ಟ್ಯಪೂರ್ಣವಾಗಿ ಬಳಸಿದ್ದಾರೆ. ಅರಿವು ಎಂಬುದು ಪರವಸ್ತುವಿನ ತಿಳಿವಳಿಕೆ. ಪ್ರಜ್ಞೆ ಎಂಬುದು ವಸ್ತುವಿನ ತಿಳಿವಳಿಕೆ. ಪರವಸ್ತುವಿನಿಂದ ವಸ್ತುವಿನ ನಿರ್ಮಾಣವಾಗಿದೆ. ಅಂದರೆ ಬ್ರಹ್ಮದಿಂದ ಬ್ರಹ್ಮಾಂಡ ನಿರ್ಮಾಣವಾಗಿದೆ. ಹಾಗೆಂದರೆ ಜಂಗಮದಿಂದ ಸ್ಥಾವರ ನಿರ್ಮಾಣವಾಗಿದೆ. ಬ್ರಹ್ಮವು ಜಂಗಮವಾದರೆ ಬ್ರಹ್ಮಾಂಡ ಸ್ಥಾವರ. ಹೀಗೆ ಪ್ರತಿವಸ್ತುವಿನ ಸಂಬಂಧ ಮೂಲವಸ್ತುವಿನ ಜೊತೆಗೆ ಇದೆ. ಆದ್ದರಿಂದ ಮೂಲವಸ್ತುವಿನ ಅರಿವಿನೊಂದಿಗೆ ವಸ್ತುಜಗತ್ತಿನಲ್ಲಿ ಪ್ರಜ್ಞಾಪೂರ್ಣವಾಗಿ ಬದುಕಿದಾಗ ಮಾತ್ರ ಅರಿವಿನ ನುಡಿ ಮತ್ತು ಪ್ರಜ್ಞೆಯ ನಡೆಯಲ್ಲಿ ವ್ಯತ್ಯಾಸವಿರದು. ಇದುವೇ ನಡೆ ನುಡಿ ಸಿದ್ಧಾಂತ. 'ಕೈಯುಳಿಕತ್ತಿ ಅಡಿಗೂಂಟಕ್ಕೆ ಅಡಿಯಾಗಬೇಡ ಅರಿ ನಿಜಾತ್ಮಾರಾಮನಾ' ಎಂಬ ಮಾದಾರ ಚೆನ್ನಯ್ಯನವರ ವಚನಾಂಕಿತ ನಡೆನುಡಿ ಸಿದ್ಧಾಂತದ ಸಂಕೇತವಾಗಿದೆ. ಕಾಯಕ ಸಮೇತವಾಗಿ ನಮ್ಮೆಲ್ಲ ನಡೆವಳಿಕೆಗಳು ಅರಿವಿನಿಂದ ಕೂಡಿರಬೇಕು. ಆ ಮೂಲಕ ನಡೆನುಡಿಯಲ್ಲಿ ಏಕೋಭಾವ ಉಂಟಾಗಬೇಕು. ಅಂದಾಗ ಮಾತ್ರ ಜೀವಕಾರುಣ್ಯದ ಸಮಾಜ ನಿರ್ಮಾಣವಾಗಿ ಎಲ್ಲೆಡೆ ಸಮಾನತೆಯ ವಾತಾವರಣ ಸೃಷ್ಟಿಯಾಗುವುದು.

ನಡೆ ಮತ್ತು ನುಡಿಯಲ್ಲಿ ವ್ಯತ್ಯಾಸವಾದಾಗ ನಾವು ಆತ್ಮವಂಚಕರಾಗುವೆವು. ನಡೆ ಮತ್ತು ನುಡಿಯಲ್ಲಿ ಯಾವುದೇ ವ್ಯತ್ಯಾಸವಿಲ್ಲದಾಗ ಅದುವೇ ನಡೆನುಡಿ ಸಿದ್ಧಾಂತ ವಾಗುವುದು. ಹೀಗೆ ಬದುಕುವವರೇ ಕುಲಜರು. ಅಂದರೆ ಅವರು ಯಾವುದೇ ಕುಲದವರಿದ್ದರೂ ಕುಲಸೂತಕವಿರುವುದಿಲ್ಲ. ಹೊಲೆ ಸೂತಕವಿರುವುದಿಲ್ಲ. ಒಳ್ಳೆಯ ಮಾತುಗಳನ್ನಾಡುತ್ತ ಕೆಟ್ಟ ನಡವಳಿಕೆ ಇದ್ದರೆ ಅದು ಮುಕ್ತಿ ಕಾಣದ ಹೊಲೆಬದುಕು. ಕಳ್ಳತನ, ವ್ಯಭಿಚಾರ ಮುಂತಾಗಿ ದಾರಿತಪ್ಪಿ ಹಾಳಾಗಿ ಹೋಗುವವರು ಕುಲೋತ್ತಮರು ಎಂದು ಹೇಳಲು ಸಾಧ್ಯವೆ ಎಂದು ಚೆನ್ನಯ್ಯನವರು ಪ್ರಶ್ನಿಸುತ್ತಾರೆ. 'ಸದಾಚಾರವೇ ಕುಲ; ಅನಾಚಾರವೇ ಹೊಲೆ' ಎಂದು ವ್ಯಾಖ್ಯಾನಿಸುತ್ತಾರೆ. ಈ ಸರಿ ತಪ್ಪುಗಳ ಬಗ್ಗೆ ಪರಿಜ್ಞಾನವಿರಬೇಕು. ಅಂದಾಗ ಮಾತ್ರ ನಮ್ಮೊಳಗಿನ ಘನವನ್ನು ತಿಳಿದುಕೊಂಡು ಘನಮನದವರಾಗಲು ಸಾಧ್ಯ ಎಂದು ತಿಳಿಸುತ್ತಾರೆ.

ಬಸವಣ್ಣನವರು ಮಾದಾರ ಚೆನ್ನಯ್ಯನವರನ್ನು ತಮ್ಮ ವಚನಗಳಲ್ಲಿ ಪದೇಪದೇ ಸ್ಮರಿಸುತ್ತಾರೆ. 'ಮಾದಾರ ಚೆನ್ನಯ್ಯನ ಮನೆಯ ಮಗ ನಾನು' ಎಂದು ಹೆಮ್ಮೆಯಿಂದ ಹೇಳುತ್ತಾರೆ. 'ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ ನಿಮ್ಮಿಂದಧಿಕ ನೋಡಾ ಕೂಡಲಸಂಗಮದೇವಾ' ಎಂದು ಅವರನ್ನು ದೇವರಿಗಿಂತಲೂ ಮೇಲ್ಮಟ್ಟದಲ್ಲಿಟ್ಟು ನೋಡುತ್ತಾರೆ. ವರ್ಣ, ಜಾತಿ ಮತ್ತು ಅಸ್ಪೃಶ್ಯತೆಯಿಂದ ಕೂಡಿದ ಶ್ರೇಣೀಕೃತ ಸಮಾಜದಲ್ಲಿ

ಮಾದಾರ ಚೆನ್ನಯ್ಯನವರು ಕಟ್ಟಕಡೆಯ ಜಾತಿಗೆ ಸೇರಿದ್ದಾರೆ. ಆದರೆ ಕಾಯಕ, ಪ್ರಸಾದ ಮತ್ತು ದಾಸೋಹ ಪ್ರಜ್ಞೆಯಿಂದ ಕೂಡಿದ ಬಸವ ಸಮಾಜದಲ್ಲಿ ಅದೇ ಮಾದಾರ ಚೆನ್ನಯ್ಯನವರು ತಮ್ಮ ಸಾತ್ವಿಕ ವ್ಯಕ್ತಿತ್ವದ ವಿಕಸನದೊಂದಿಗೆ ಅತ್ಯುನ್ನತ ಮಟ್ಟ ತಲುಪಿದ್ದಾರೆ.

ನಡೆ ನುಡಿ ಸಿದ್ಧಾಂತದಿಂದ ಮಾನವನ ವ್ಯಕ್ತಿತ್ವ ವಿಕಸನಗೊಳ್ಳುವುದು. ಆ ಮೂಲಕ ಆತ ಪರಿಪೂರ್ಣತೆಯನ್ನು ಸಾಧಿಸುವನು ಎಂಬುದು ವಚನಕಾರರ ನಿಲವಾಗಿದೆ. ಮಾನವ ವಿಶ್ವಮಾನವನಾದಾಗ ಮಾತ್ರ ಪರಿಪೂರ್ಣ ಮಾನವನಾಗುವನು. ವಿಶ್ವಮಾನವನಾದವನು ಬದುಕಿನಲ್ಲಿ ಎಲ್ಲ ರೀತಿಯ ಸಮಾನತೆಯನ್ನು ಬಯಸುವನು. ಎಲ್ಲ ರೀತಿಯ ಶೋಷಣೆಯನ್ನು ವಿರೋಧಿಸುವನು. ಪ್ರಕೃತಿಯ ಸಮತೋಲನಕ್ಕಾಗಿ ಹಾತೊರೆಯುವನು. ಮನುಷ್ಯನನ್ನು ವಿಶ್ವದ ಕೇಂದ್ರವಾಗಿಸದೆ ಸಕಲ ಜೀವಿಗಳನ್ನು ವಿಶ್ವದ ಕೇಂದ್ರವಾಗಿಸುವನು. ಆಹಾರ ಸರಪಳಿಯ ಪ್ರಜ್ಞೆಯೊಂದಿಗೆ 'ಪ್ರತಿಯೊಂದು ಜೀವಿಗೂ ಬದುಕುವ ಹಕ್ಕಿದೆ' ಎಂದು ಪ್ರತಿಪಾದಿಸುವನು. ಇಂಥ ಹೊರಜಗತ್ತಿನ ಪ್ರಜ್ಞೆ ಮತ್ತು ಒಳಜಗತ್ತಿನ ಅರಿವಿನೊಂದಿಗೆ ನಡೆ ಮತ್ತು ನುಡಿಯಲ್ಲಿ ವ್ಯತ್ಯಾಸವಿಲ್ಲದೆ ಬದುಕುವವನೇ ವಿಶ್ವಮಾನವ. ಹೀಗೆ ಶರಣರು ವಿಶ್ವಮಾನವರಾಗಿದ್ದಾರೆ. ನಡೆ ನುಡಿ ಸಿದ್ಧಾಂತವು ಮಾನವನನ್ನು ವಿಶ್ವಮಾನವನನ್ನಾಗಿಸುವ ಶಕ್ತಿಯನ್ನು ಹೊಂದಿದೆ ಎಂಬುದನ್ನು ಶರಣರು ತೋರಿಸಿಕೊಟ್ಟಿದ್ದಾರೆ.

ಈ ಬದುಕು ಮಿಥ್ಯೆ ಎಂದು ಭಾವಿಸುವವರು 'ನುಡಿ' ಪ್ರಧಾನವಾದ ಸಿದ್ಧಾಂತ ವನ್ನು ರೂಪಿಸುವರೇ ಹೊರತು ಆ ನುಡಿಗೆ ಇರಬೇಕಾದ 'ನಡೆ'ಯ ಜವಾಬ್ದಾರಿಯನ್ನು ನಿಭಾಯಿಸುವ ಎಚ್ಚರಿಕೆಯನ್ನು ವಹಿಸುವುದಿಲ್ಲ. ಹೀಗಾಗಿ ಅಂಥವರ ಸಿದ್ಧಾಂತ ಬರಿ ಮಾತಿನಮಂಟಪವಾಗಿ ಉಳಿಯುವುದು. ಇಂಥ ಮಾತಿನ ಸಿದ್ಧಾಂತಗಳಿಂದಾಗಿ ದುಡಿಯುವ ವರ್ಗ ಸದಾ ಮೋಸಕ್ಕೊಳಗಾಗುತ್ತ ಬಂದಿದೆ. ಶರಣರು ನಡೆ ನುಡಿ ಸಿದ್ಧಾಂತವನ್ನು 'ದುಡಿಯುವ ವರ್ಗದ ಸಿದ್ಧಾಂತ' ಎಂಬುದನ್ನು ಸಾಬೀತು ಪಡಿಸಿದರು. ದುಡಿಯದೆ ಬದುಕುವವರು ನಡೆ ನುಡಿ ಸಿದ್ಧಾಂತವನ್ನು ಒಪ್ಪಿಕೊಳ್ಳುವುದಿಲ್ಲ. ಅವರದು ಏನಿದ್ದರೂ ಮಹೋನ್ನತ ವಿಚಾರಗಳ ಮೇಲೆ ನಿಂತ ಸಿದ್ಧಾಂತವಾಗಿದೆ. ಆದರೆ ಆ ವಿಚಾರಗಳನ್ನು ಕಾರ್ಯರೂಪಕ್ಕೆ ತಂದರೆ ಅವರ ಐಷಾರಾಮಿ ಬದುಕಿಗೇ ಸಂಚಕಾರ ಬಂದೊದಗುತ್ತದೆ. ಆದ್ದರಿಂದ ಅವರು ಉನ್ನತ ವಿಚಾರಗಳ ಭ್ರಮೆಯನ್ನು ಸೃಷ್ಟಿಸುತ್ತ ದುಡಿಯುವ ವರ್ಗವನ್ನು ಮೋಸಗೊಳಿಸುತ್ತಲೇ ಇರುತ್ತಾರೆ. ವರ್ಣಾಶ್ರಮಧರ್ಮದ ಚಾತುರ್ವರ್ಣ್ಯ ಪದ್ಧತಿಯಲ್ಲಿನ ಮೊದಲ ಮೂರು ವರ್ಣಗಳಾದ ಬ್ರಾಹ್ಮಣ, ಕ್ಷತ್ರಿಯ

ಮತ್ತು ವೈಶ್ಯ ವರ್ಣಗಳ ಜನರು ಹಿಂದಿನ ಕಾಲದಲ್ಲಿ, ಬದುಕಿಗೆ ಬೇಕಾದ ವಸ್ತುಗಳ ಉತ್ಪಾದನೆಯಲ್ಲಿ ತೊಡಗಿದವರಲ್ಲ. ಬ್ರಾಹ್ಮಣರು ವೇದಶಾಸ್ತ್ರಪುರಾಣಗಳನ್ನೋದುತ್ತ ಐಷಾರಾಮಿ ಜೀವನ ಕಳೆದರು. ಕ್ಷತ್ರಿಯರು ಕ್ಷೇತ್ರ ಪಾಲನೆ ಮಾಡುತ್ತ ಅಧಿಕಾರವನ್ನು ಅನುಭವಿಸಿದರು. ವೈಶ್ಯರು ವಸ್ತುಗಳನ್ನು ಕೊಳ್ಳುತ್ತ ಮತ್ತು ಮಾರುತ್ತ ಸಂಪತ್ತನ್ನು ಸಂಪಾದಿಸಿದರು. ಹೀಗೆ ಈ ಮೂರೂ 'ಅನುತ್ಪಾದಕ' ವರ್ಣಗಳು ಒಂದಕ್ಕೊಂದು ಪೂರಕವಾಗಿ ಬದುಕುತ್ತ ಶೋಷಕ ವರ್ಗದ ನಿರ್ಮಾಣ ಮಾಡಿದವು. ಸದಾ ಉತ್ಪಾದನೆ ಯಲ್ಲಿ ತೊಡಗಿದ್ದ ಶೂದ್ರ ವರ್ಣದ ಕಾಯಕಜೀವಿಗಳು ದುಡಿಯುವ ವರ್ಗವನ್ನು ಪ್ರತಿನಿಧಿಸಿದರು. ಈ ಕಾಯಕಜೀವಿಗಳನ್ನು ಮೇಲ್ವರ್ಗದ ಮೂರೂ ವರ್ಣಗಳವರು ಸಹಸ್ರಾರು ವರ್ಷಗಳಿಂದ ಶೋಷಣೆ ಮಾಡುತ್ತಲೇ ಬಂದಿದ್ದಾರೆ. ಈ ಶೋಷಣೆಯ ವ್ಯವಸ್ಥೆಯನ್ನು ಒಕ್ಕಲಿಗ ಮುದ್ದಣ್ಣನವರು ಸೂಕ್ಷ್ಮವಾಗಿ ಗಮನಿಸಿ ಬರೆದ ಈ ವಚನ ಇಡೀ ಸಮಾಜದ ಕಣ್ಣು ತೆರೆಸುವಂತಿದೆ.

> **ವೇದಶಾಸ್ತ್ರವನೋದುವುದಕ್ಕೆ ಹಾರುವನಲ್ಲ;**
> **ಇರಿದು ಮೆರೆಯುವುದಕ್ಕೆ ಕ್ಷತ್ರಿಯನಲ್ಲ;**
> **ವ್ಯವಹರಿಸುವುದಕ್ಕೆ ವೈಶ್ಯನಲ್ಲ;**
> **ಉಳುವ ಒಕ್ಕಲಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯಾ**
> **ಕಾಮಭೀಮಜೀವಧನದೊಡೆಯ ನೀನೆ ಬಲ್ಲೆ.**

**–ಒಕ್ಕಲಿಗ ಮುದ್ದಣ್ಣ**

ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು ಲೌಕಿಕ ಜ್ಞಾನವನ್ನು ಹೊಂದಿದವರಾಗಿ ದ್ದಾರೆ. ಶಾಸ್ತ್ರಗಳಿಂದ ಬ್ರಾಹ್ಮಣರು, ಶಸ್ತ್ರಗಳಿಂದ ಕ್ಷತ್ರಿಯರು ಮತ್ತು ಶೂದ್ರರು ಉತ್ಪಾದಿಸಿದ ವಸ್ತುಗಳ ವ್ಯವಹಾರದಿಂದ ವೈಶ್ಯರು ಬದುಕುತ್ತಾರೆ. ವೇದಶಾಸ್ತ್ರಗಳನ್ನು ಬರೆಯಲು ಬ್ರಾಹ್ಮಣರು ಬಳಸುತ್ತಿದ್ದ ತಾಡೋಲೆ ಹಾಗೂ ಅವರು ಯಜ್ಞಯಾಗಾದಿಗಳಿಗೆ ಬೇಕಾದ ಪರಿಕರಗಳನ್ನು ಶೂದ್ರರೇ ತಯಾರಿಸುತ್ತಿದ್ದರು. ಕ್ಷತ್ರಿಯರು ಹೋರಾಡಲು ಬಳಸುವ ಶಸ್ತ್ರಾಸ್ತ್ರಗಳನ್ನು ಮತ್ತು ವೈಶ್ಯರು ಮಾರಲು ಬಳಸುತ್ತಿದ್ದ ವಸ್ತುಗಳನ್ನು ಕೂಡ ಶೂದ್ರರೇ ತಯಾರಿಸುತ್ತಿದ್ದರು. ಮೂರೂ ವರ್ಣಗಳವರ ಐಷಾರಾಮಿ ಬದುಕಿಗೆ ಬೇಕಾದ ವಸ್ತು ಮತ್ತು ಆಹಾರ ಧಾನ್ಯಗಳನ್ನು ಶೂದ್ರರೇ ಉತ್ಪಾದಿಸುತ್ತಿದ್ದರು! ಹೀಗೆ ಎಲ್ಲವನ್ನೂ ಉತ್ಪಾದಿಸುವ ಶೂದ್ರರು ಎಲ್ಲ ರೀತಿಯ ಅವಕಾಶಗಳಿಂದ ವಂಚಿತರಾದರು. ಐಹಿಕ ಅಭ್ಯುದಯಕ್ಕಾಗಿ ಏನನ್ನೂ ಉತ್ಪಾದಿಸದ ಇತರ ಮೂರು ವರ್ಣದವರು ಸವರ್ಣೀಯ ರೆನಿಸಿದರು. ಆದರೆ ಸುಖಕರವಾದ ಐಹಿಕ ಬದುಕಿಗೆ ಬೇಕಾದ ವಸ್ತುಗಳೆಲ್ಲ ಇವರ ಕೈವಶವಾದವು.

ಉತ್ಪಾದಿಸುವ ಶೂದ್ರರಿಗೆ ಹಾಗೂ ಶೂದ್ರರಲ್ಲಿ ಕಟ್ಟಕಡೆಯವರಾದ ಪಂಚಮರಿಗೆ ಜನಿವಾರ ಇಲ್ಲ. ಆದರೆ ಮೇಲಿನ ಮೂರೂ 'ಅನುತ್ಪಾದಕ' ವರ್ಣಗಳಿಗೆ ಜನಿವಾರವಿದೆ! ಈ ಮೂರು ವರ್ಣಗಳವರ ಅಡುಗೆ ಮನೆಗಳನ್ನು ನೋಡಿಕೊಂಡು ಇವರ ಪುರುಷ ಪ್ರಾಧಾನ್ಯ ಅಹಂಕಾರವನ್ನು ಸಹಿಸಿಕೊಂಡ ಅವರ ಮಹಿಳೆಯರಿಗೂ ಜನಿವಾರ ಇಲ್ಲ!

"ಅಜ್ಯೇಷ್ಠಾಸೋ ಅಕನಿಷ್ಠಾ ಸ ಏವತೇ ಸಂಭ್ರಾಂತರೋವಾವೃಧುಃ
ಸೌಭಗಾಯ ಯುವಾಪಿತಾಸ್ವಪಾರುದ್ರ ಏಷಾಂ ಪ್ರಶ್ನಿರ್ಮಾತಾ ಸುದಿನಾಮರುದ್ಭ್ಯಃ"
–ಋಗ್ವೇದ

(ಈ ಮನುಷ್ಯರಲ್ಲಿ ದೊಡ್ಡವರಾಗಲಿ ಚಿಕ್ಕವರಾಗಲಿ ಯಾರೂ ಇರುವುದಿಲ್ಲ. ಎಲ್ಲರೂ ಸಮಾನರು. ಇವರೆಲ್ಲರ ತಂದೆ ಪರಮಾತ್ಮನು, ತಾಯಿ ಭೂದೇವತೆಯು. ಇದನ್ನು ತಿಳಿದೇ ಸಹೋದರರಾದ ಮಾನವರೆಲ್ಲ ಉನ್ನತರಾಗಬಲ್ಲರು.) ಎಂಬುದು ಋಗ್ವೇದದ ಆಶಯವಾಗಿದೆ. ಸವರ್ಣೀಯರು ಇಂಥ ಮಾತಿನ ಮಂಟಪಗಳನ್ನು ಕಟ್ಟುತ್ತಲೇ ಜನಸಂಖ್ಯೆಯ ಶೇಕಡಾ ೯೦ರಷ್ಟಿರುವ ಶೂದ್ರರನ್ನು ಮತ್ತು ಪಂಚಮರನ್ನು ಹೊರಗಿಟ್ಟರು. ಇಂಥ ಉದಾತ್ತ ವಿಚಾರಗಳು ಮೇಲಿನ ಮೂರು ವರ್ಣಗಳ ಜನರಿಗೆ ಮಾತ್ರ ಸಂಬಂಧಿಸಿವೆ ಎಂಬುದು ಅವರೆಲ್ಲರ ದೃಢನಿಲುವಾಗಿತ್ತು. ಅಂತೆಯೆ ಬಸವಣ್ಣನವರು "ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿ ವನಯ್ಯಾ?" ಎಂದು ಪ್ರಶ್ನಿಸಿದರು. "ಗುಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ." ಎಂದು ಅಲ್ಲಮಪ್ರಭುಗಳು ತಿಳಿಸಿದರು. "ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದಡೆ ಹಿಡಿದಿರ್ದ ಲಿಂಗವು ಘಟಸರ್ಪವಯ್ಯಾ" ಎಂದು ಬಸವಣ್ಣನವರು ಎಚ್ಚರಿಸಿದರು. "ದಿಟವ ನುಡಿವುದು ನುಡಿದಂತೆ ನಡೆವುದು" ಎಂದು ನಡೆ ನುಡಿ ಸಿದ್ಧಾಂತವನ್ನು ಎತ್ತಿಹಿಡಿದರು. "ಭಕ್ತಿ ಸುಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ." ಎಂದು ಹೇಳುವ ಮೂಲಕ ನಡೆ ನುಡಿ ಸಿದ್ಧಾಂತವನ್ನು ಬದುಕಿನಲ್ಲಿ ಅಳವಡಿಸಿಕೊಂಡಿರುವೆ ಎಂದು ಸಾರಿದರು. "ಕ್ರಿಯೆಯೇ ಜ್ಞಾನ, ಆ ಜ್ಞಾನವೇ ಕ್ರಿಯೆ. ಜ್ಞಾನವೆಂದಡೆ ತಿಳಿಯು ವುದು, ಕ್ರಿಯೆ ಎಂದಡೆ ತಿಳಿದಂತೆ ಮಾಡುವುದು. ಪರಸ್ತ್ರೀಯ ಭೋಗಿಸಬಾರದೆಂಬುದೇ ಜ್ಞಾನ; ಅದರಂತೆ ಆಚರಿಸುವುದೇ ಕ್ರಿಯೆ" ಎಂದು ಚೆನ್ನಬಸವಣ್ಣನವರು ನಡೆನುಡಿ ಸಿದ್ಧಾಂತವನ್ನು ಸಕಲರು ಅರ್ಥ ಮಾಡಿಕೊಳ್ಳುವ ರೀತಿಯಲ್ಲಿ ತಿಳಿಸಿರುವರು.

ಇಂಥ ನಡೆನುಡಿ ಸಿದ್ಧಾಂತವನ್ನು "ವೇದದಲ್ಲಿ ಕಂಡುದಿಲ್ಲ; ಅದು ಮಾತಿನ ಮನೆಯಾಗಿ ಹೋಯಿತ್ತು." ಎಂದು ವಚನಭಂಡಾರಿ ಶಾಂತರಸರು ಸ್ಪಷ್ಟಪಡಿಸಿದ್ದಾರೆ. ಹೀಗೆ ಮಾತಿನ ಮನೆಯ ವರ್ಣಾಶ್ರಮ ಧರ್ಮದಲ್ಲಿ ನಂಬಿಕೆ ಇಟ್ಟವರು ಜಾತೀಯತೆ

ಮತ್ತು ಅಸ್ಪೃಶ್ಯತೆಯನ್ನು ಆಚರಿಸುತ್ತ ಮಾನವರಲ್ಲಿ ಭೇದಭಾವವನ್ನು ಸೃಷ್ಟಿಸಿದರು. ಆ ಮೂಲಕ ಜನಿವಾರ ರಹಿತ ಶೂದ್ರ ವರ್ಣದ ಬಹುಪಾಲು ಜನರನ್ನು ಶೋಷಣೆಗೆ ಒಳಪಡಿಸುತ್ತ ಸುಖದ ಬದುಕನ್ನು ಬದುಕಿದರು.

"ಚೆನ್ನಬಸವನೆಂಬ ಪ್ರಸಾದಿಯ ಪಡೆದು, ಅನುಭವಮಂಟಪವನನುಮಾಡಿ ಅನುಭವಮೂರ್ತಿಯಾನ ನಮ್ಮ ಬಸವಯ್ಯನು" ಎಂದು ಬಸವಣ್ಣನವರ ವಿಚಾರಪತ್ನಿ ನೀಲಾಂಬಿಕೆ ಹೇಳಿದ್ದಾರೆ. ಬಸವಣ್ಣನವರು ಮಾತಿನ ಮನೆಗೆ ಪರ್ಯಾಯವಾಗಿ ಅನುಭವ ಮಂಟಪದಿಂದ ಕೂಡಿದ ಮಹಾಮನೆಯ ಕಡೆಗೆ ಸಕಲಜೀವಾತ್ಮರನ್ನು ಕರೆದೊಯ್ದರು. ಹೀಗೆ ಅನುಭಾವದ ಅರ್ಥದಲ್ಲಿ ಈ ಮಹಾಮನೆ ಎಂಬುದು ತನ್ನೊಳಗೆ ಇಡೀ ವಿಶ್ವವನ್ನು ಒಳಗೊಂಡಿದೆ. ನಿಸರ್ಗ ಸಮೇತ ಎಲ್ಲ ಜೀವಗಳು ಈ ಮಹಾಮನೆ ಯಲ್ಲಿ ನೆಮ್ಮದಿ ಪಡೆಯುವವು. "ಜೀವಜಾಲದಲ್ಲಿದೆ ಚರಾಚರವೆಲ್ಲ" ಎಂದು ಬಸವಣ್ಣನವರು ಹೇಳಿದ್ದಾರೆ. ಬಸವಣ್ಣನವರ ಮಹಾಮನೆಯು ಮಾನವ ಕುಲವನ್ನಷ್ಟೇ ಅಲ್ಲ, ಇಡೀ ಜೀವಜಾಲವನ್ನೇ ಸಂರಕ್ಷಿಸುವ ಪರಿಕಲ್ಪನೆಯನ್ನು ಹೊಂದಿದೆ. ಹೀಗೆ ಬಸವಣ್ಣನವರು 'ದಯೆ' ಶಬ್ದವನ್ನು ವಿಶಿಷ್ಟ ಅರ್ಥದಲ್ಲಿ ಬಳಸುವುದರ ಮೂಲಕ ಅದಕ್ಕೆ ಜೀವಜಾಲವನ್ನು ಸಂರಕ್ಷಿಸುವ ಕರ್ತವ್ಯದಲ್ಲಿ ನಿರತವಾಗುವಂತೆ ಮಾಡುತ್ತಾರೆ. ಆ ಕಾರಣದಿಂದಲೇ ದಯೆಯು ಮಾನವನ ಮನದಲ್ಲಿ ಮಹಾಮನೆಯನ್ನು ನಿರ್ಮಿಸುತ್ತದೆ. ಇಡೀ ವಿಶ್ವವೇ ನಮ್ಮೊಳಗೆ ಬಂದು ನೆಲೆಗೊಳ್ಳುವಂತೆ ಮಾಡುತ್ತದೆ. ಹೀಗೆ ಬಸವಣ್ಣನವರ ದಯೆಯು ಇಂಥ ಸಂವೇದನೆಯನ್ನು ಸ್ಫುರಿಸುತ್ತದೆ. ಇಷ್ಟಲಿಂಗ ಪೂಜಾಫಲವೆಂದರೆ ಈ ಪ್ರಕಾರದ ದಯಾಭಾವವನ್ನು ಹೊಂದುವುದು. ಅದನ್ನೇ ನಡೆಯುವುದು ಮತ್ತು ನುಡಿಯುವುದು. ಇಂಥ ಸರ್ವಸಮತ್ವದ ಅರಿವನ್ನು ಆಚರಣೆಯಲ್ಲಿ ತಂದು ಲೋಕವನ್ನು ಆನಂದಮಯವಾಗಿಸುವುದೇ ಶರಣರ ನಡೆ ನುಡಿ ಸಿದ್ಧಾಂತ.

**ನಡೆಯಲರಿಯದೆ, ನುಡಿಯಲರಿಯದೆ**
**ಲಿಂಗವ ಪೂಜಿಸಿ ಫಲವೇನು? ಫಲವೇನು?**
**ಅವರ ದುಃಖವೆನ್ನ ದುಃಖ ಅವರ ಸುಖವೆನ್ನ ಸುಖ**
**ಕೂಡಲಸಂಗನ ಶರಣರ ಮನನೊಂದಡೆ**
**ಆನು ಬೆಂದೆನಯ್ಯಾ.**

**–ಬಸವಣ್ಣ**

ಎಂದು ಹೇಳುವಲ್ಲಿ ಈ ನಡೆ ನುಡಿ ಸಿದ್ಧಾಂತವೇ ಇಷ್ಟಲಿಂಗ ಪೂಜಾಫಲ ಎಂಬುದು ತಿಳಿದುಬರುತ್ತದೆ. ಶರಣರ ಇಂಥ ನಡೆ ನುಡಿ ಸಿದ್ಧಾಂತದ ಮೂಲಕ ನಾವು 'ಲೋಕದ ದುಃಖ ನಮ್ಮ ದುಃಖ, ಲೋಕದ ಸುಖ ನಮ್ಮ ಸುಖ' ಎಂಬ

ಸಂವೇದನೆಯನ್ನು ಹೊಂದುವೆವು. ಇಂಥ ಸಂವೇದನಾಶೀಲ ಸಮಾಜದಲ್ಲಿ ಅಹಿಂಸೆಯೇ ಜೀವನಧರ್ಮವಾಗುತ್ತದೆ. ಅಹಿಂಸೆಯ ವಾತಾವರಣದಲ್ಲಿ ಮಾತ್ರ ಶರಣರ ಕಲ್ಯಾಣ ರಾಜ್ಯದ ಸ್ಥಾಪನೆ ಸಾಧ್ಯ.

"ಶಿವಭಕ್ತನಾಗಿ ಸತ್ಯ ಸದಾಚಾರ ಭಕ್ತಿವಿಡಿದು ನಡೆಯಬಲ್ಲಡೆ ಕೈಲಾಸ ಬಟ್ಟೆ ಬೇರಿಲ್ಲವೆಂದ ಕಲಿದೇವಯ್ಯ" ಎಂದು ಮಡಿವಾಳ ಮಾಚಿದೇವರು ಹೇಳುವಲ್ಲಿ ನಡೆ ನುಡಿ ಸಿದ್ಧಾಂತದ ಅರಿವು ಮತ್ತು ಆಚರಣೆಯೊಂದಿಗೆ ನಮ್ಮೊಳಗೆ ಸ್ವರ್ಗದ ಸೃಷ್ಟಿಯಾಗುತ್ತದೆ ಎಂಬುದರ ಸೂಚನೆ ಇದೆ. ಭಕ್ತಿ ಎಂಬುದು ಇಂಥ ಸತ್ಯದ ಅರಿವು ಮತ್ತು ಸದಾಚಾರದಿಂದ ಕೂಡಿದುದಾಗಿದೆ. ಇಂಥ ಭಕ್ತಿಯ ನಡುಗೆ ನಮ್ಮನ್ನು ನಮ್ಮೊಳಗಿನ ಕೈಲಾಸದ ಕಡೆಗೇ ಒಯ್ಯುವುದು. ಬಸವಣ್ಣನವರು ಹೇಳುವಂತೆ ಆಗ ನಮ್ಮ ಕಾಯವೇ ಕೈಲಾಸವಾಗುವುದು.ಷ

●

# ಮಾನವಘನತೆ

ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಪರಮೇಶ್ವರರೆಂಬ ಸಂದಣಿ
ತಲೆದೋರುವ ಮುನ್ನ, ಅಲ್ಲಿಂದತ್ತ ಬಯಲೆ ಸ್ವರೂಪವಾಯಿತ್ತು.
ಆ ಸ್ವರೂಪಿನ ಘನತೆಯ ಉಪಮಿಸಬಾರದು.
ನೋಡಬಾರದ ಬೆಳಗು, ಕೂಡಬಾರದ ಮೂರ್ತಿ.
ಅಖಂಡ ಅಪ್ರತಿಮ ನಮ್ಮ ಗುಹೇಶ್ವರಲಿಂಗದ ಬೆಳಗಿನ ಮೂಲವ
ಲಿಂಗಸಂಗಿಗಳಲ್ಲದೆ ಮಿಕ್ಕಿನ ಅಂಗವಿಕಾರಿಗಳೇನಬಲ್ಲರೊ?

–ಅಲ್ಲಮಪ್ರಭುದೇವರು

ಈ ವಚನವು ವಿಜ್ಞಾನದ ತಾಯಿಯಾಗಿದೆ. ಗುಹೇಶ್ವರನು ಗುಹೆ ಎಂಬ ವಸ್ತುವಿನೊಳಗಿನ ಚೈತನ್ಯವಾಗಿದ್ದಾನೆ. ಚೈತನ್ಯದ ಮೂಲರೂಪವೇ ಬಯಲು. ಆ ಬಯಲೆಂಬುದು ಸ್ವರೂಪವನ್ನು ಪಡೆದುಕೊಂಡಾಗ ಚೈತನ್ಯವನ್ನೊಳಗೊಂಡ ವಿಶ್ವದ ನಿರ್ಮಾಣವಾಯಿತು.

ಬಯಲೇ ಚೈತನ್ಯವಾಗಿದೆ. ಆ ಚೈತನ್ಯದಿಂದಲೇ ವಸ್ತುವೆಂಬ ವಿಶ್ವವು ರೂಪ ಗೊಂಡಿದೆ. ಆ ವಿನಾಶಕ್ಕೊಳಗಾಗುವ ವಿಶ್ವ ಎಂಬ ವಸ್ತುವಿನೊಳಗೆ ಚೈತನ್ಯವು ತನ್ನ ಅವಿನಾಶವಾದ ಮೂಲರೂಪಿನೊಂದಿಗೆ ಉಳಿದುಕೊಂಡಿದೆ. ಕಾಲಮಿತಿಯನ್ನು ಹೊಂದಿರುವ ವಸ್ತು ಎಂಬುದು ಚೈತನ್ಯದ ತೋರಿಕೆಯ ರೂಪವಾದರೆ ಕಾಲಾತೀತವಾದ ಚೈತನವು ವಸ್ತುವಿನ ನಿರಾಕಾರ ಸ್ಥಿತಿಯಾಗಿದೆ. ವಿಶ್ವವೆಂಬ ಗುಹೆಯು ಗುಹೇಶ್ವರನ ಅಂಶದಿಂದಲೇ ರೂಪುಗೊಂಡಿದೆ. 'ರೂಪಿಂಗೆ ಕೇಡುಂಟು' ಎಂದು ಅಲ್ಲಮ ಇನ್ನೊಂದು ವಚನದಲ್ಲಿ ಹೇಳಿದ್ದಾರೆ. ವಸ್ತುರೂಪವು ವಾಸ್ತವವಾಗಿದೆ ಆದರೆ ಸತ್ಯವಲ್ಲ.

ವಾಸ್ತವ ಎಂಬುದು ಕಾಲಮಿತಿಯೊಳಗೆ ಇರುವಂಥದ್ದು. ಆದ್ದರಿಂದಲೇ ವಾಸ್ತವದೊಳಗೆ ಇರುವ ವಸ್ತುವಿಗೆ ಸಾವು ಉಂಟು ಎಂದು ಅಲ್ಲಮ ತಿಳಿಸುತ್ತಾರೆ. ಚೈತನ್ಯವೆಂಬುದು ಶಾಶ್ವತ ಮತ್ತ ನಿರಂತರ ಚಲನಶೀಲವಾದುದು. ಚೈತನ್ಯವು ಕಾಲಾತೀತವಾದುದು. ಅದಕ್ಕೆ ಸಾವಿಲ್ಲ. ವಸ್ತುರೂಪವಾದ ವಿಶ್ವವೆಂಬ ಅಶಾಶ್ವತ ಗುಹೆಯಲ್ಲಿ ಚೈತನ್ಯವೆಂಬ ಶಾಶ್ವತ ಈಶ್ವರನಿದ್ದಾನೆ. ಇಂಥ ಚೈತನ್ಯರೂಪಿ ಈಶ್ವರನೇ ವಿಶ್ವದ ಮೂಲಾಧಾರ.

**ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು**
**ಬಯಲು ಬಯಲಾಗಿ ಬಯಲಾಯಿತಯ್ಯಾ**
**ಬಯಲ ಜೀವನ, ಬಯಲ ಭಾವನೆ,**
**ಬಯಲ ಬಯಲಾಗಿ ಬಯಲಾಯಿತಯ್ಯಾ**
**ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು.**
**ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ.**

**–ಅಲ್ಲಮಪ್ರಭುದೇವರು**

ಎಂದು ಅಲ್ಲಮಪ್ರಭುದೇವರು ಬಯಲೆಂಬ ಚೈತನ್ಯದ ಲೀಲೆಯನ್ನು ತಿಳಿಸಿದ್ದಾರೆ. ಈ ಪರಮಸತ್ಯವನ್ನು ತಾವು ಅರಿತುಕೊಂಡ ಬಗ್ಗೆ ಈ ವಚನದಲ್ಲಿ ಸೂಚಿಸಿದ್ದಾರೆ. ಈ ಘನತ್ವದ ಬಯಲೇ ಗುಹೇಶ್ವರನ ಮೂಲರೂಪವಾಗಿದೆ. ಈ ಬಯಲು ರೂಪು ತಾಳಿದ ನಂತರವೇ ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಪರಮೇಶ್ವರರೆಂಬ ಸಂದಣಿ ತಲೆದೋರಿದೆ.

ಈ ಬಯಲೆಂಬ ಘನವನ್ನು ಅರಿತು ಸರ್ವಸಮತ್ವ ಭಾವದೊಂದಿಗೆ ಮುನ್ನಡೆಯುವವನು ಘನತೆಯುಳ್ಳವನಾಗುತ್ತಾನೆ. ಅವನೇ ಘನತೆಯುಳ್ಳ ಮಾನವ ಎಂದೆನಿಸಿಕೊಳ್ಳುತ್ತಾನೆ. ಆತ ಯಾವುದೇ ಧರ್ಮದಲ್ಲಿರಲಿ, ಯಾವುದೇ ಜಾತಿಯವನಾಗಿರಲಿ ಆತನೆ ಮಾನವಘನತೆಯನ್ನು ಎತ್ತಿಹಿಡಿದ ಮಾರ್ಗದರ್ಶಿಯಾಗುತ್ತಾನೆ. "ಹೊಲೆಯ ಹೊಲಬಿಗನಾದಡೆ ಅವನ ಹೊರೆಯಲಿಪ್ಪುದು ಲೇಸು" ಎಂದು ಬಸವಣ್ಣನವರು ಹೇಳಿದ್ದಾರೆ. ಮಾನವ ಘನತೆಯೊಂದಿಗೆ ಯಾರು ಬದುಕಿನ ಮಾರ್ಗವನ್ನು ಕಂಡುಕೊಂಡಿರುವರೊ ಅವರ ಮಾರ್ಗದರ್ಶನದಲ್ಲಿ ಬದುಕಬೇಕೆಂಬುದು ಬಸವಣ್ಣನವರ ಆಶಯವಾಗಿದೆ. ಮನುವಾದಿಗಳು ಮೂದಲಿಸುವ ಹೊಲೆ ಮಾದಿಗ ಜಾತಿಗಳಲ್ಲೇ ಅಂಥ ಘನತೆವೆತ್ತವರು ಜನಿಸಿರಬಹುದು; ಆದರೆ ಅವರೇ ಗುರುಸ್ಥಾನದಲ್ಲಿ ಇರುವವರು ಎಂದು ಬಸವಣ್ಣನವರು ಮಾನವಘನತೆಯ ಮಹತ್ವವನ್ನು ಸಾರಿದ್ದಾರೆ.

ಮೇಲು ಕೀಳೆಂಬ ಜಾತಿಗಳು, ಬಡವ ಶ್ರೀಮಂತ ಎಂಬ ವರ್ಗಗಳು, ಹೆಣ್ಣು ಗಂಡೆಂಬ ಭೇದಭಾವಗಳು, ಕರಿಯ ಬಿಳಿಯ ಎಂಬ ವರ್ಣಭೇದಗಳು ಮಾನವಘನತೆಗೆ ಕಳಂಕ ತರುವಂಥವುಗಳಾಗಿವೆ. ಈ ಎಲ್ಲ ಭೇದಭಾವಗಳನ್ನು ಎತ್ತಿಹಿಡಿಯುವ ವೈದಿಕ ಧರ್ಮವು ಮಾನವಘನತೆಯ ಕಡುವೈರಿಯಾಗಿದೆ. ಅಂತೆಯೆ ಬಸವಾದಿ ಶರಣರು ವೈದಿಕಧರ್ಮವನ್ನು ಅಲ್ಲಗಳೆದು ತುಳಿತಕ್ಕೊಳಗಾದ ಅಸ್ಪೃಶ್ಯರು ಮೊದಲು ಮಾಡಿ ಎಲ್ಲ ಜಾತಿ ಜನಾಂಗಗಳ ಕಾಯಕಜೀವಿಗಳ ಘನತೆಯನ್ನು ಎತ್ತಿಹಿಡಿಯುವ ಜನ ಸಾಮಾನ್ಯರ ಧರ್ಮವಾದ ಲಿಂಗವಂತ ಧರ್ಮವನ್ನು ದಯೆ ಮತ್ತು ಅಹಿಂಸೆಯ ನೆಲೆಯ ಮೇಲೆ ಚಳವಳಿಯ ಧರ್ಮವಾಗಿಸಿ ಎಲ್ಲ ತೆರನಾದ ಅಸಮಾನತೆಗಳ ವಿರುದ್ಧ ಹೋರಾಡಿದರು. ಈ ಕಾರಣದಿಂದಲೇ ಲಿಂಗವಂತ ಧರ್ಮವು ನಿಜವಾದ ಅರ್ಥದಲ್ಲಿ ಮಾನವಘನತೆಯ ಧರ್ಮವೇ ಆಗಿದೆ.

ಮಾನವಘನತೆ ಎಂಬ ಅರಿವಿನ ಕುರುಹು ಆದಂಥ ಇಷ್ಟಲಿಂಗವನ್ನು ಬಸವಣ್ಣನವರು ಸೃಷ್ಟಿಸಿದರು. ಎಲ್ಲ ಅನಿಷ್ಟಗಳನ್ನು ಪರಿಹರಿಸುವಂಥ ವಿವೇಚನಾ ಶಕ್ತಿಯನ್ನು ಕೊಡುವುದರ ಸಂಕೇತವಾದ ಈ ಇಷ್ಟಲಿಂಗವು ಮಹಾಘನವೆಂಬ ಲಿಂಗದೇವನ ಕುರುಹು ಆಗಿ ಮಾನವಘನತೆಯನ್ನು ಎತ್ತಿಹಿಡಿಯಿತು. ಯಾವ ಅಸ್ಪೃಶ್ಯರಿಗೆ ಮತ್ತು ತುಳಿತಕ್ಕೊಳಗಾದವರಿಗೆ ಮಂದಿರಗಳಲ್ಲಿ ಪ್ರವೇಶವನ್ನು ಮನುವಾದಿಗಳು ನಿರಾಕರಿಸಿದ್ದರೋ ಅಂಥವರಿಗಾಗಿ ಇಷ್ಟಲಿಂಗ ಜನ್ಮತಾಳಿದ್ದು ಕ್ರಾಂತಿಕಾರಿಯಾದ ಅನನ್ಯ ಘಟನೆಯಾಗಿದೆ. ಯಾರ ಎದೆಯ ಮೇಲೆ ಲಿಂಗವಿದೆಯೊ ಅವರು ವರ್ಗ, ವರ್ಣ, ಜಾತಿ ಮತ್ತು ಲಿಂಗಭೇದಗಳನ್ನು ಮಾಡುಂತಿಲ್ಲ. ಇಷ್ಟಲಿಂಗ ಪೂಜೆ ಎಂಬುದು ಎಲ್ಲ ರೀತಿಯ ಅಸಮಾನತೆಗಳನ್ನು ತೊಡೆದು ಹಾಕುತ್ತ ಮಾನವ ಏಕತೆಯನ್ನು ಸಾಧಿಸುವ ಅರಿವನ್ನು ಕೊಡುವಂಥದ್ದು.

**ಲಿಂಗವ ಪೂಜಿಸಿ ಫಲವೇನಯ್ಯಾ,**
**ಸಮರತಿ ಸಮಕಳೆ ಸಮಸುಖವನರಿಯದನ್ನಕ್ಕ?**
**ಲಿಂಗವ ಪೂಜಿಸಿ ಫಲವೇನಯ್ಯಾ,**
**ಕೂಡಲಸಂಗಮದೇವರ ಪೂಜಿಸಿ**
**ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ?**

**–ಬಸವಣ್ಣನವರು**

ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ. ಈ ವಚನವು ಲೌಕಿಕ ಅನುಭವ ಮತ್ತು ಅಲೌಕಿಕ ಅನುಭಾವಕ್ಕೆ ಸಂಬಂಧಿಸಿದಂತೆ ಏಕಕಾಲಕ್ಕೇ ಸಮತೆಯನ್ನು ಎತ್ತಿಹಿಡಿಯುವ

ವಚನವಾಗಿದೆ. ಮಾನವರು ಸೃಷ್ಟಿಯಲ್ಲಿನ ಎಲ್ಲದರ ಜೊತೆ ಹಾಗೂ ಸೃಷ್ಟಿಕರ್ತನ ಜೊತೆ ಸಮಾನತೆಯನ್ನು ಹೊಂದುತ್ತ ಒಂದಾಗಬೇಕು ಎಂಬ ಮಹದಾಶಯವನ್ನು ಈ ವಚನ ಹೊಂದಿದೆ. ಮಧುರಭಕ್ತಿಯು 'ಶರಣ ಸತಿ ಲಿಂಗ ಪತಿ' ಎಂಬ ಭಾವದೊಂದಿಗೆ ದೇವರ ಜೊತೆ ಭಕ್ತನು ಅಭೇದ್ಯನಾಗುವಂತೆ ಮಾಡುತ್ತದೆ. ದೇವಕಳೆ ಮತ್ತು ಭಕ್ತಕಳೆಯಲ್ಲಿ ಸಮತೆಯನ್ನು ಸಾಧಿಸುವುದರ ಮೂಲಕ ಎಲ್ಲವೂ ಸಮಸುಖದಲ್ಲಿ ಬೆರೆತುಹೋಗುವಂತೆ ಮಾಡುತ್ತದೆ. ತನ್ನ ತಾನರಿದು ತಾನೇ ಸ್ವಯಂಭೂವಾಗುವಂಥ ಎತ್ತರಕ್ಕೇರುವ ಸಾಧ್ಯತೆಯನ್ನು ಭಕ್ತ ತನ್ನೊಳಗಿನ ಮಹಾಘನವನ್ನು ಅರಿತಾಗ ಪಡೆದುಕೊಳ್ಳುವಂತಾಗುವನು.

ಈ ವಚನ ಲೌಕಿಕದ ಸಂದರ್ಭದಲ್ಲೂ ಮಹತ್ವದ್ದನ್ನೇ ಸಾಧಿಸಿದೆ. ಸಮರತಿ ಪದವು ಲಿಂಗಭೇದವನ್ನು ತಿರಸ್ಕರಿಸುತ್ತದೆ. ಸಮಕಳೆಯು ಬ್ರಹ್ಮತೇಜಸ್ಸು, ಕ್ಷಾತ್ರತೇಜಸ್ಸು ಭ್ರಮಾತ್ಮಕವಾದುವು ಎಂದು ಸಾರುತ್ತದೆ. ಘನತೆಯುಳ್ಳ ಮಾನವರೆಲ್ಲರ ತೇಜಸ್ಸು ಒಂದೇ ಆಗಿರುತ್ತದೆ ಎಂಬುದನ್ನು ಸೂಚಿಸುತ್ತದೆ. ಸಮಸುಖದ ಅರಿವು ವರ್ಗಭೇದವನ್ನು ಅಳಿಸಿಹಾಕುತ್ತದೆ. ಬಡವರಿಗೊಂದು ಬದುಕು, ಶ್ರೀಮಂತರಿಗೊಂದು ಬದುಕು ಎಂಬ ಮಿಥ್ಯೆಯನ್ನು ಒಡೆದುಹಾಕುತ್ತದೆ. ನದಿಯೊಳಗೆ ನದಿ ಬೆರೆಯುವ ಹಾಗೆ ಇಡೀ ಮಾನವಕುಲ ಜಾತಿ, ಮತ, ಕುಲ, ವರ್ಣ, ವರ್ಗ, ಲಿಂಗ ಮತ್ತು ಧರ್ಮಭೇದಗಳಿಲ್ಲದೆ ಒಂದಾಗುವಂಥ ಅರಿವನ್ನು ಮೂಡಿಸುತ್ತ ಅದನ್ನು ಆಚರಣೆಯಲ್ಲಿ ತರುವುದೇ ಲಿಂಗಪೂಜಾ ಫಲ ಎಂದು ಬಸವಣ್ಣನವರು ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ.

ನಮ್ಮೊಳಗಿನ ಮಹಾಘನದ ಅರಿವಿಲ್ಲದೆ ನಾವು ಘನತೆಯುಳ್ಳವರಾಗುವುದಿಲ್ಲ ಎಂಬುದು ಬಸವಣ್ಣನವರ ದೃಢನಿರ್ಧಾರವಾಗಿದೆ.

**ಘನಗಂಭೀರ ಮಹಾಘನದೊಳಗೆ**
**ಘನಕ್ಕೆ ಘನವಾಗಿದ್ದೇನಯ್ಯಾ.**
**ಕೂಡಲಸಂಗಮದೇವಯ್ಯನೆಂಬ**
**ಮಹಾಬೆಳಗಿನ ಬೆಳಗಿನೊಳಗಿದ್ದೇನೆಂಬ ಶಬ್ದ**
**ಮುಗ್ಧವಾದುದೇನೆಂಬೆನಯ್ಯಾ.**

**–ಬಸವಣ್ಣನವರು**

ನಮ್ಮೊಳಗಿನ ಘನದ ಅರಿವಾದಾಗ ಮಾತ್ರ ನಾವು ಘನತೆವೆತ್ತರಾಗುತ್ತೇವೆ. ಮಾನವಘನತೆ ಎಂಬುದು ಮಾನವ ತನ್ನೊಳಗಿನ ಮಹಾಘನದ ಅರಿವನ್ನು ಹೊಂದಿದಾಗ ಮಾತ್ರ ಬರುವಂಥದ್ದು. ಘನತೆವೆತ್ತ ಮಾನವ ಪ್ರಜ್ಞಾಪೂರ್ಣವಾದ

ಮುಗ್ಧತೆಯನ್ನು ಹೊಂದಿದವನಾಗಿರುತ್ತಾನೆ. ಆತ ಮಹಾಬೆಳಗಿನ ಬೆಳಗಿನೊಳಗಿದ್ದೇನೆ ಎಂಬುದನ್ನು ಮುಗ್ಧತೆಯೊಂದಿಗೆ ಅನುಭವಿಸುತ್ತ ಎಲ್ಲರೊಳಗೆ ಒಂದಾಗಿಹೋಗುತ್ತಾನೆ. ಆತನ ದೃಷ್ಟಿಯಲ್ಲಿ ಎಲ್ಲರೂ ಶಿವಸ್ವರೂಪಿಗಳಾಗಿರುತ್ತಾರೆ. ಆತ ಚಾತುರ್ವರ್ಣಾತೀತನಾಗಿ ಸರ್ವಸಮತ್ವದ ದ್ರಷ್ಟಾರನಾಗುತ್ತಾನೆ. ಆ ಮೂಲಕ ಮಾನವಕುಲದ ವಿಮೋಚನೆಯ ಲಿಂಗತತ್ತ್ವವನ್ನು ವಚನಗಳ ಮೂಲಕ ಸಾರುತ್ತಾನೆ. ಹೀಗೆ ಮಾನವಘನತೆ ಎಂಬುದು ಪರಿಪೂರ್ಣವಾದುದು, ಸರಳವಾದುದು, ಸಹಜವಾದುದು, ಉತ್ಕೃಷ್ಟವಾದುದು.

ಇಂಥ ಮಾನವಘನತೆಯುಳ್ಳ ಶರಣರು ಶ್ರೀಮಂತಿಕೆಯನ್ನು ತಿರಸ್ಕರಿಸುತ್ತ ಶರಣಸಂಕುಲವೆಂಬ ಮೇಲಿಲ್ಲದ, ಕೀಳಿಲ್ಲದ ಮತ್ತು ಸರ್ವಸಮತ್ವದ ಶ್ರೀಮಂತ ಸಮಾಜವನ್ನು ಸೃಷ್ಟಿಸಿದರು. ಶರಣರ ಘನತೆವೆತ್ತ ವ್ಯಕ್ತಿತ್ವವನ್ನು ಬಸವಣ್ಣನವರು ಬಹು ಸುಂದರವಾಗಿ ಚಿತ್ರಿಸಿದ್ದಾರೆ.

**ಮನೆ ನೋಡಾ ಬಡವರು; ಮನ ನೋಡಾ ಘನ**
**ಸೋಂಕಿನಲ್ಲಿ ಶುಚಿ; ಸರ್ವಾಂಗ ಕಲಿಗಳು.**
**ಪಸರಕ್ಕನುವಿಲ್ಲ; ಬಂದ ತತ್ಕಾಲಕ್ಕೆ ಉಂಟು.**
**ಕೂಡಲಸಂಗನ ಶರಣರು ಸ್ವತಂತ್ರಧೀರರು.**

**–ಬಸವಣ್ಣನವರು**

ಶರಣರು ಭೌತಿಕ ಜಗತ್ತಿನಲ್ಲಿ ಬಡವರಾಗಿದ್ದಾರೆ. ಆದರೆ ಅನುಭಾವದ ಜಗತ್ತಿನಲ್ಲಿ ಘನತೆಯುಳ್ಳ ಮನಸ್ಥಿತಿಯವರಾಗಿದ್ದಾರೆ. ಅವರು ಪರಧನ, ಪರಸ್ತ್ರೀಯರನ್ನು ಮುಟ್ಟದೆ ಶುಚಿತ್ವವನ್ನು ಸಾಧಿಸಿದ್ದಾರೆ. ಅವರು ಯಾವುದೇ ರೀತಿಯ ಸೋಂಕಿಗೆ ಒಳಗಾಗದ ಪವಿತ್ರಾತ್ಮರಾಗಿದ್ದಾರೆ. ಅವರು ಸರ್ವಾಂಗಗಳ ಮೇಲೆ ವಿಜಯವನ್ನು ಸಾಧಿಸಿದ ಕಲಿಗಳಾಗಿದ್ದಾರೆ. ಅವರು ಕಣ್ಣಿನ ಮೇಲೆ ವಿಜಯವನ್ನು ಸಾಧಿಸಿದ್ದರಿಂದ ಅವರ ಕಣ್ಣುಗಳು ಕೆಟ್ಟದ್ದನ್ನು ನೋಡ ಬಯಸುವುದಿಲ್ಲ. ಮೂಗಿನ ಮೇಲೆ ವಿಜಯ ಸಾಧಿಸಿದ್ದರಿಂದ ವಾಸನಾಮಯ ಜಗತ್ತಿನ ಕಡೆಗೆ ಅವರು ಹೋಗುವಂಥವರಲ್ಲ. ಕಿವಿಯ ಮೇಲೆ ವಿಜಯ ಸಾಧಿಸಿದ್ದರಿಂದ ಕೆಟ್ಟದ್ದನ್ನು ಕೇಳುವ ತವಕ ಅವರಿಗಿಲ್ಲ. ಕೈಗಳ ಮೇಲೆ ವಿಜಯ ಸಾಧಿಸಿದ್ದರಿಂದ ಕೆಟ್ಟದ್ದನ್ನು ಮುಟ್ಟಲಾರರು. ಕಾಲುಗಳ ಮೇಲೆ ವಿಜಯ ಸಾಧಿಸಿದ್ದರಿಂದ ಕೆಟ್ಟದ್ದರ ಕಡೆಗೆ ಹೋಗಲಾರರು. ನಾಲಗೆಯ ಮೇಲೆ ವಿಜಯ ಸಾಧಿಸಿದ್ದರಿಂದ ಕೆಟ್ಟದ್ದನ್ನು ಸೇವಿಸಲಾರರು. ಹೀಗೆ ಅವರು ಸರ್ವಾಂಗ ಕಲಿಗಳು.

ಬಡತನದ ಮೇಲೂ ವಿಜಯ ಸಾಧಿಸಿದ್ದರಿಂದ ಅವರು ಸಂಗ್ರಹಬುದ್ಧಿಯನ್ನು ಹೊಂದಿಲ್ಲ. ಸ್ವಾರ್ಥಕ್ಕಾಗಿ ಸಂಗ್ರಹಿಸುವುದನ್ನು ಅವರು ತಿರಸ್ಕರಿಸುತ್ತಾರೆ. ಆದರೆ ಕಾಯಕಜೀವಿಗಳಾದ ಅವರು ತಮ್ಮ ಶಕ್ತಿ ಸಾಮರ್ಥ್ಯದ ಮೇಲೆಯೆ ಬದುಕುವುದರಿಂದ ಅವರಿಗೆ ದೈನಂದಿನ ಬದುಕಿನಲ್ಲಿ ಯಾವ ಕೊರತೆಯೂ ಇಲ್ಲ. ಅವರ ಬಳಿ ಹೋದ ಸಂದರ್ಭದಲ್ಲಿ ಯಾರೂ ನಿರಾಶರಾಗದಂಥ ವಾತಾವರಣ ಸಹಜವಾಗಿಯೇ ಇರುತ್ತದೆ. ತತ್ಕಾಲಕ್ಕೆ ಸಿಗುವ ಪದಾರ್ಥಗಳ ಜೊತೆಗೆ ಅವರ ದಾಸೋಹಂಭಾವ ಇದಕ್ಕೆ ಕಾರಣ ವಾಗಿದೆ. ಈ ಎಲ್ಲ ಕಾರಣಗಳಿಂದ ಕೂಡಲಸಂಗನ ಶರಣರು ಸ್ವತಂತ್ರಧೀರರಾಗಿದ್ದಾರೆ. ಅಂಥ ಸಾತ್ವಿಕ ಶಕ್ತಿಯೊಂದಿಗೆ ಮಾನವಘನತೆಯ ರಕ್ಷಣೆಗಾಗಿ ಹೋರಾಡುವ ಕಲಿಗಳಾಗಿದ್ದಾರೆ.

ಇಂಥವರೇ ನಿಜವಾದ ಲಿಂಗವಂತರು. ಇಂಥ ಲಿಂಗವಂತರು ಇದ್ದಲ್ಲಿ ಮೇಲು ಕೀಳಿನ ನಿಂದೆ ಇರುವುದಿಲ್ಲ. ಮಾನವರಿಗೆ ಅಪಮಾನವಾಗುವ ಸ್ಥಾನದಲ್ಲಿ ಈ ಲಿಂಗವಂತರು ಇರುವುದಿಲ್ಲ. ಅಂತೆಯ ಕೂಡಲಸಂಗನ ಶರಣರಾದ ಅವರನ್ನು ಯಾರೊಂದಿಗೂ ಹೋಲಿಸಲು ಸಾಧ್ಯವಿಲ್ಲ. ಅವರು ನಿಜಮಾನವರಾಗಿ ಮಹಾಘನ ವಾಗಿದ್ದಾರೆ. ಆ ಮೂಲಕ ಶಿವಸ್ವರೂಪಿಗಳೇ ಆಗಿದ್ದಾರೆ ಎಂದು ಬಸವಣ್ಣನವರು ಸೂಚಿಸಿದ್ದಾರೆ.

**ಲಿಂಗವಿದ್ದಲ್ಲಿ ನಿಂದೆಯಿರದು, ನಿಂದೆಯಿದ್ದಲ್ಲಿ ಲಿಂಗವಿರದು.**
**ಅವರೆಂತಿದ್ದಡೇನು? ಹೇಗಿದ್ದಡೇನು? ಲಿಂಗವಂತರವರು.**
**ಉಪಮಿಸಬಾರದ ಮಹಾಘನವು ಕೂಡಲಸಂಗನ ಶರಣರು.**

**–ಬಸವಣ್ಣನವರು**

ಆದರೆ ಬರಿ ಇಷ್ಟಲಿಂಗವನ್ನು ಕಟ್ಟಿಕೊಂಡವರು ಲಿಂಗವಂತರಾಗುವುದಿಲ್ಲ ಎಂದು ಬಸವಣ್ಣನವರು ಎಚ್ಚರಿಸಿದ್ದಾರೆ. "ಎನ್ನ ತನು ಭಕ್ತ, ಮನ ಭವಿ" ಎಂದು ತಿಳಿಸುವ ಮೂಲಕ ಅಂತರಂಗ ಶುದ್ಧಿಯಾಗದೆ ಹೊರಗೆ ಶುದ್ಧಿಯಾಗದು ಎಂದು ಸ್ಪಷ್ಟಪಡಿಸಿದ್ದಾರೆ. ಶುದ್ಧವಾಗಿ ಕಾಣುವುದೆಲ್ಲವೂ ಶುದ್ಧವಾದುದಲ್ಲ ಎಂಬುದನ್ನು ಎತ್ತಿ ತೋರಿಸಿದ್ದಾರೆ.

ನಮ್ಮೊಳಗಿನ ಮಹಾಘನವನ್ನು ಅರಿಯದೆ ನಾವು ಪರಿಶುದ್ಧರಾಗೆವು. ಮಾನವ ಘನತೆಯನ್ನು ಹೊಂದಬೇಕಾದಲ್ಲಿ ನಮ್ಮೊಳಗಿನ ಮಹಾಘನವನ್ನು ಅರಿಯುವುದೊಂದೇ ಮಾರ್ಗ ಎಂದು ಅಕ್ಕಮಹಾದೇವಿ ತಿಳಿಸುತ್ತಾರೆ. ಐಹಿಕ ಜಗತ್ತಿನ ವಸ್ತುಮೋಹದಲ್ಲೇ ಮುಳುಗಿದವರು ತಮ್ಮೊಳಗಿನ ಮಹಾಘನವನ್ನು ಅರಿಯುವುದಿಲ್ಲ ಎಂಬುದು ಅಕ್ಕನ ಉವಾಚವಾಗಿದೆ.

ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು.
ಇರುಳು ನಾಲ್ಕು ಜಾವ ವ್ಯಸನಕ್ಕೆ ಕುದಿವರು.
ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ,
ತಮ್ಮೊಳಗಿರ್ದ ಮಹಾಘನವನರಿಯರು ಚೆನ್ನಮಲ್ಲಿಕಾರ್ಜುನಾ.

–ಅಕ್ಕಮಹಾದೇವಿ

ಬಸವಧರ್ಮ ಎಂಬ ಲಿಂಗವಂತ ಧರ್ಮ ಜನ್ಮತಾಳಿದ ಕನ್ನಡದ ನೆಲದಲ್ಲಿ ಇಂದಿಗೂ ಅಸ್ಪೃಶ್ಯತೆ, ಜಾತೀಯತೆ ಮತ್ತು ಎಲ್ಲೆಡೆ ಮನುವಾದಿ ವೈದಿಕತೆ ತಾಂಡವವಾಡುತ್ತ ಮಾನವಘನತೆಗೆ ಕುಂದು ತರುತ್ತಿರುವುದು ವಿಪರ್ಯಾಸವಾಗಿದೆ.



# ಬಸವಣ್ಣ ತಿರಸ್ಕರಿಸಿದ ದೇವರುಗಳು

ಪಂಚಮಹಾಭೂತಗಳೆಲ್ಲ ತಮ್ಮಷ್ಟಕ್ಕೆ ತಾವು ಎಲ್ಲ ಮಹತ್ವವನ್ನು ಹೊಂದಿವೆ. ಆದರೆ ನಿಸರ್ಗದ ವಿರಾಟ್ ಸ್ವರೂಪಕ್ಕೆ ತಲೆಬಾಗಿದ ವೈದಿಕರು ಅವುಗಳನ್ನು ದೈವತ್ವಕ್ಕೆ ಏರಿಸಿ 'ಭಯವೇ ಧರ್ಮದ ಮೂಲ' ಎನ್ನುವಂತೆ ಮಾಡಿದರು. ಆಗ ನೀರು ಜಲದೇವತೆಯಾಯಿತು. ಕಿಚ್ಚು ಅಗ್ನಿದೇವತೆಯಾಯಿತು. ನೆಲ ಭೂದೇವಿಯಾಯಿತು. ಗಾಳಿ ವಾಯುದೇವತೆಯಾಯಿತು. ಆದರೆ ಇವೆಲ್ಲವನ್ನೊಳಗೊಂಡ ಅನಂತವಾದ ಶೂನ್ಯರೂಪಿ ಬಯಲು ಮತ್ತು ನಮ್ಮೊಳಗಿನ 'ಬಯಲು' ಕೂಡಿದ ನಂತರ ಸೃಷ್ಟಿಯಾಗುವ ಸಂಗಮವೇ ಬಸವಣ್ಣನವರ ಕೂಡಲಸಂಗಮದೇವ. ಇಂಥ ಅರಿವಿನ ಕುರುಹು ಇಷ್ಟಲಿಂಗ.

ಯಾವುದೇ ರೀತಿಯ ಭಂಗ ಬರದ ಹಾಗೆ ಈ ದೇವನನ್ನು ಆರಾಧಿಸಬೇಕೆಂಬುದು ಬಸವಣ್ಣನವರ ಬಯಕೆ. ತೆತ್ತೀಸ (೩೩) ಕೋಟಿ ವೈದಿಕ ದೇವತೆಗಳು ಮತ್ತು ಅಸಂಖ್ಯಾತ ಶೂದ್ರ ದೇವತೆಗಳು ನಿಜದೇವರ ಆರಾಧನೆಯ ಏಕಾಗ್ರತೆಗೆ ಭಂಗವುಂಟು ಮಾಡುವುದನ್ನು ಬಸವಣ್ಣನವರು ಸಹಿಸಲಿಲ್ಲ. ಚಿತ್ರ ವಿಚಿತ್ರ ಕಲ್ಪನೆಯ ದೇವರುಗಳು ಮತ್ತು ಅವುಗಳ ಮೂರ್ತಿಗಳು ಅನುಭಾವ ಲೋಕದ ಅರಿಯುವಿಕೆಗೆ ಮತ್ತು ಭೌತಿಕ ಲೋಕದ ಇರುವಿಕೆಗೆ ಕಿರಿಕಿರಿಯುಂಟುಮಾಡುವಂಥವು ಎಂಬುದರ ಸ್ಪಷ್ಟ ಕಲ್ಪನೆ ಬಸವಣ್ಣನವರಿಗೆ ಇತ್ತು. ಅಭಂಗ ಅವಸ್ಥೆಯಲ್ಲಿ ಮಾತ್ರ ನಿಜದೇವನ ಜೊತೆ ಅನುಸಂಧಾನ ಸಾಧ್ಯ ಎಂಬುದು ಅವರ ದೃಢ ನಿಲವು. ಈ ಕಾರಣದಿಂದಲೇ ಅವರು ವಿವಿಧ ವಸ್ತುಗಳಿಗೆ ಸಂಬಂಧಿಸಿದ ದೈವತ್ವದ ಮಿಥ್ (ದಂತಕಥೆ) ಅನ್ನು ಭೇದಿಸುತ್ತಾರೆ.

'ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ' ಎಂದು ಬಸವಣ್ಣನವರು ಹೇಳಿದರು. ನೆಲವನ್ನು ದೇವರಾಗಿ ನೋಡದೆ ಕೇವಲ ನೆಲವಾಗಿ ನೋಡುವುದನ್ನು ಕಲಿಸಿದರು. ಹೀಗೆ ನೋಡಿದಾಗ ನೆಲವು ಭಾವನಾತ್ಮಕ ಪ್ರಶ್ನೆಯಾಗದೆ ಬದುಕಿಗೆ ಉತ್ತರವಾಗುವುದು. 'ಜಲವೊಂದೆ ಶೌಚಾಚಮನಕ್ಕೆ' ಎಂದು ತಿಳಿಸಿದಾಗ ಜಲ ದೇವತೆಯಾಗುವುದಿಲ್ಲ. ನೀರನ್ನು ನೀರಾಗಿ ನೋಡಿದಾಗ ಅದರ ಸೌಂದರ್ಯ ಮತ್ತು ಉಪಯೋಗದ ಪ್ರಜ್ಞೆ ಏಕಕಾಲಕ್ಕೆ ಬರುವುದು. ಜಲವು ದೇವತೆಯಾದಾಗ ಜನ ಅದರೊಳಗೆ ಮುಳುಗುವರು. ಗಂಗೆಯ ಜಲಮಾಲಿನ್ಯಕ್ಕೆ ಅದು ದೇವತೆ ಎಂಬ ಮೂಢನಂಬಿಕೆಯೆ ಕಾರಣ. ಅಗ್ನಿಯನ್ನು ದೇವತೆ ಎಂದು ತಿಳಿದದ್ದರಿಂದಲೇ ಯಜ್ಞ ಸಂಪ್ರದಾಯ ಬೆಳೆಯಿತು. ಅದು ಅರಣ್ಯ ನಾಶಕ್ಕೆ ನಾಂದಿ ಹಾಡಿತು. ವರ್ಷಗಟ್ಟಲೆ ನಡೆಯುತ್ತಿದ್ದ ಯಜ್ಞ ಯಾಗಾದಿಗಳಿಗಾಗಿ ಅದೆಷ್ಟು ಪ್ರಾಣಿಗಳು ಮತ್ತು ಮರಗಳು ಬಲಿಯಾಗಿವೆ ಎಂಬುದನ್ನು ಊಹಿಸಲಸಾಧ್ಯ. ಅಂತೆಯೆ ಬಸವಣ್ಣನವರು ವೈದಿಕರ ಅಗ್ನಿ ದೇವತೆಗೆ 'ಕಿಚ್ಚು' ಎಂದು ಕರೆದಿದ್ದಾರೆ.

**"ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು**
**ಕಿಚ್ಚೆದ್ದು ಸುಡುವಾಗ**
**ಬಚ್ಚಲ ನೀರು, ಬೀದಿಯ ಧೂಳ ಹೊಯ್ದು**
**ಬೊಬ್ಬಿಟ್ಟೆಲ್ಲರ ಕರೆವರಯ್ಯಾ**
**ಕೂಡಲಸಂಗಮದೇವಾ**
**ವಂದನೆಯ ಮರೆದು ನಿಂದಿಸುತ್ತಿದ್ದರು."**

ಹೀಗೆ ಬಸವಣ್ಣನವರು 'ಅಗ್ನಿದೇವ'ನ ನಿಜಸ್ವರೂಪವನ್ನು ತೋರಿಸುತ್ತ ನಮ್ಮನ್ನು ನಿಜದ ನೆಲೆಗೆ ತಂದು ನಿಲ್ಲಿಸುತ್ತಾರೆ. ಬಸವಣ್ಣನವರು ವಿವಿಧ ವಸ್ತುಗಳಿಗೆ ದೈವೀಸ್ವರೂಪವನ್ನು ಕಿತ್ತೆಸೆದು ಅವುಗಳ ಮೂಲಸ್ವರೂಪದ ಮಹತ್ವವನ್ನು ತಿಳಿಸಿರುವರು. ಅವುಗಳನ್ನು ಹಿತಮಿತವಾಗಿ ಬಳಸಲು ಸೂಚಿಸಿರುವರು.

**"ಅರಗು ತಿಂದು ಕರಗುವ ದೈವವನೆಂತು ಸರಿಯೆಂಬೆನಯ್ಯಾ,**
**ಉರಿಯ ಕಂಡಡೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ,**
**ಅವಸರ ಬಂದಡೆ ಮಾರುವ ದೈವವನೆಂತು ಸರಿಯೆಂಬೆನಯ್ಯಾ,**
**ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೇವ."**

ಎಂದು ಸಾರುತ್ತಾರೆ. ತಮ್ಮನ್ನೇ ಕಾಪಾಡಿಕೊಳ್ಳದ ದೈವಗಳು ನಮ್ಮನ್ನೆಂತು ಕಾಪಾಡುವವು ಎಂಬ ವಿಚಾರ ನಮ್ಮಲ್ಲಿ ಹುಟ್ಟುವಂತೆ ಮಾಡುತ್ತಾರೆ. ಇಂಥ ಎಲ್ಲ

ದೈವಗಳ ಅನುಭವ ನಮಗಿದೆ. ಬರಗಾಲದಲ್ಲಿ ಜಗಲಿಯ ಮೇಲಿನ ಪಂಚಲೋಹಗಳ ವಿಗ್ರಹಗಳು ಕೈಗೆ ಸಿಕ್ಕ ದರದಲ್ಲಿ ಕಂಚುಗಾರರ ಅಂಗಡಿ ಸೇರುವುದನ್ನು ನಾವೆಲ್ಲ ಕಂಡಿದ್ದೇವೆ.

**"ಉಳ್ಳವರು ಶಿವಾಲಯವ ಮಾಡಿಹರು**
**ನಾನೇನು ಮಾಡಲಿ ಬಡವನಯ್ಯಾ**
**ಎನ್ನ ಕಾಲೇ ಕಂಬ, ದೇಹವೇ ದೇಗುಲ,**
**ಶಿರ ಹೊನ್ನ ಕಲಶವಯ್ಯಾ**
**ಕೂಡಲಸಂಗಮದೇವಾ, ಕೇಳಯ್ಯಾ**
**ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ."**

ಸದಾ ಶ್ರೀಮಂತರ ಸೇವೆಯಲ್ಲಿ ನಿರತವಾಗುವ ಸ್ಥಾವರದೇವರಗಳ ಬಗ್ಗೆ ಬಸವಣ್ಣನವರಿಗೆ ತಿರಸ್ಕಾರವಿದೆ. ಶ್ರೀಮಂತರಿಗೂ ದೇವಾಲಯಗಳಿಗೂ ಘನವಾದ ಸಂಬಂಧವಿದೆ. ಹಿಂದಿನ ಕಾಲದಲ್ಲಿ ದೇವಾಲಯಗಳು ಶ್ರೀಮಂತರ ಸ್ವಿಸ್ ಬ್ಯಾಂಕ್‌ಗಳಂತೆ ಇದ್ದವು. ದೇವಾಲಯಗಳಲ್ಲಿನ ಲೈಂಗಿಕ ಶಿಲ್ಪ, ದೇವದಾಸಿಯರು, ನೃತ್ಯ, ಸಂಗೀತ ಹೀಗೆ ಇವೆಲ್ಲ ಉಳ್ಳವರಿಗೆ ಪ್ರಿಯವಾದವುಗಳೇ ಆಗಿವೆ. ಉಳ್ಳವರು ದೇವರ ಜೊತೆ ಸಲುಗೆಯಿಂದ ಇರುತ್ತಾರೆ.

**"ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರೂ**
**ಸಲಿಗೆಯಿಂದ ಒಳಗೈದಾರೆ.**
**ಆನು ದೇವಾ ಹೊರಗಣವನು.**
**ಸಂಬೋಳಿ ಸಂಬೋಳಿ ಎನ್ನುತ್ತ ಇಂಬಿನಲ್ಲಿ ಇದ್ದೇನೆ.**
**ಕೂಡಲಸಂಗಮದೇವಾ**
**ನಿಮ್ಮ ನಾಮವಿಡಿದ ಅನಾಮಿಕ ನಾನು."**

ಎಂದು ಬಸವಣ್ಣನವರು ಹೇಳುವಲ್ಲಿ ತಾವು ಇಂಥದ್ದಕ್ಕೆಲ್ಲ ಹೊರಗಿನವರು ಮತ್ತು ಕೆಳಜಾತೀಕರಣಕ್ಕೆ ಒಳಗಾಗಿ ಅಂಥ ಬಡವರ ಜೊತೆ ಇರುವವರು ಎಂಬುದನ್ನು ಸೂಚಿಸಿದ್ದಾರೆ.

**"ಆಗಳೂ ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು.**
**ಹೋಗೆಂದಡೆ ಹೋಗವು,**
**ನಾಯಿಗಿಂತ ಕರಕಷ್ಟ ಕೆಲವು ದೈವಂಗಳು**
**ತಾವೇನ ಕೊಡವವು ಕೂಡಲಸಂಗಮದೇವಾ"**

ಎಂದು ಇಂಥ ದೇವರುಗಳನ್ನೆಲ್ಲ ಬಡವರ ಮನ ಮತ್ತು ಮನೆಗಳಿಂದ ಆಚೆ ನೂಕುವ ಪ್ರಯತ್ನ ಮಾಡುತ್ತಾರೆ. ಏಕೋಭಾವದಿಂದ ಪರಮಾತ್ಮನನ್ನು ಅರಿತುಕೊಂಡು ನಡೆಯುವವರು ಖಂಡಿತವಾಗಿಯೂ ಎಲ್ಲ ಜಂಜಡಗಳಿಂದ ಹೊರಬರುತ್ತಾರೆ ಎಂಬುದರ ಮನವರಿಕೆ ಮಾಡಿಕೊಡುತ್ತಾರೆ. ಅವರ ಕೂಡಲಸಂಗಮದೇವರು ಎಲ್ಲರ ದೇವರಾಗಿದ್ದಾನೆ. ಸಮಾಜದ ಎಲ್ಲ ಸ್ತರಗಳಿಂದ ಜನ ಅವರಲ್ಲಿಗೆ ಬಂದರು. ಅವರ ಶರಣಸಂಕುಲದ ಭಾಗವಾದರು. ಆದರೆ ಅವರಲ್ಲೇನಕರು ತಮ್ಮ ಸಾಂಪ್ರದಾಯಿಕ ನಡೆವಳಿಕೆಗಳಿಂದ ಹೊರಬರುವ ಸಾಮರ್ಥ್ಯವನ್ನು ತೋರಲಿಲ್ಲ.

**"ಬಡ ಹಾರುವನೇಸು ಭಕ್ತನಾದಡೆಯೂ ನೇಣಿನ ಹಂಗ ಬಿಡ!**
**ಮಾಲೆಗಾರನೇಸು ಭಕ್ತನಾದಡೆಯೂ ಬಾವಿಯ ಬೊಮ್ಮನ ಹಂಗ ಬಿಡ!**
**ಬಣಜಿಗನೇಸು ಭಕ್ತನಾದಡೆಯೂ ಒಟ್ಟಿಲ ಬೆನಕನ ಹಂಗ ಬಿಡ!**
**ಕಂಚುಗಾರನೇಸು ಭಕ್ತನಾದಡೆಯೂ ಕಾಳಿಕಾದೇವಿಯ ಹಂಗ ಬಿಡ!**
**ನಾನಾ ಹಂಗಿನವನಲ್ಲ, ನಿಮ್ಮ ಶರಣರ ಹಂಗಿನವನಯ್ಯಾ**
**ಕೂಡಲಸಂಗಮದೇವಾ."**

ಬಸವಣ್ಣನವರು ಹಂಗುದೊರೆದು ಹೊಸ ದೇವರು, ಹೊಸ ಸಮಾಜ, ಹೊಸ ತಾತ್ತ್ವಿಕ ಚಿಂತನೆ, ಹೊಸ ಆರ್ಥಿಕ ನೀತಿ ಮತ್ತು ಹೊಸ ಜೀವನ ವಿಧಾನದೊಂದಿಗೆ ಮುನ್ನಡೆದರು. ಆದರೆ ಜನಸಮುದಾಯ ಅವರ ಶಕ್ತಿಯನ್ನು ಅರಿತರೂ ಅವರ ಹೆಜ್ಜೆಯೊಡನೆ ಹೆಜ್ಜೆ ಹಾಕುವಲ್ಲಿ ಸೋತಿತು. ಈ ಕಾರಣದಿಂದ ಶರಣರು ಬಹಳ ಕಷ್ಟಪಡಬೇಕಾಯಿತು. ಅವರೆಲ್ಲ ಧನಶಕ್ತಿಯಿಂದ ಬದುಕಿದವರಲ್ಲ; ಆತ್ಮಶಕ್ತಿಯಿಂದ ಬದುಕಿದವರು.

ಆದರೂ ಜನರನ್ನು ಗೊಡ್ಡು ಸಂಪ್ರದಾಯ ಮತ್ತು ಮೂಢನಂಬಿಕೆಗಳಿಂದ ಪಾರು ಮಾಡಿ ವೈಚಾರಿಕ ನೆಲೆಯಲ್ಲಿ ಮುನ್ನಡೆಸುವ ಬಗ್ಗೆ ಬಸವಣ್ಣನವರು ಸದಾ ಚಿಂತನೆ ಮಾಡಿದ್ದಾರೆ.

**"ಹಾಳು ಮೊರಡಿಗಳಲ್ಲಿ ಊರ ದಾರಿಗಳಲ್ಲಿ**
**ಕೆರೆ ಬಾವಿ ಹೂಗಿಡು ಮರಂಗಳಲ್ಲಿ**
**ಗ್ರಾಮಮಧ್ಯಂಗಳಲ್ಲಿ ಜಲಪಥ ಪಟ್ಟಣ ಪ್ರದೇಶದಲ್ಲಿ**
**ಹಿರಿಯಾಲದ ಮರದಲ್ಲಿ ಮನೆಯ ಮಾಡಿ,**
**ಕರೆವೆಮ್ಮೆಯ ಹಸುಗೂಸು ಬಸುರಿ ಬಾಣತಿ**
**ಕುಮಾರಿ ಕೊಡಗೂಸು ಎಂಬುವರ ಹಿಡಿದುಂಬ, ತಿರಿದುಂಬ**

**ಮಾರಯ್ಯ, ಬೀರಯ್ಯ, ಕೇಚರಗಾವಿಲ, ಅಂತರಬೆಂತರ**
**ಕಾಳಯ್ಯ, ಧೂಳಯ್ಯ, ಮಾಳಯ್ಯ, ಕೇತಯ್ಯಗಳೆಂಬ ನೂರು ಮಡಕೆಗೆ**
**ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಡಿ ಸಾಲದೆ?"**

ಎಂದು ಬಸವಣ್ಣನವರು ಪ್ರಶ್ನಿಸುತ್ತಾರೆ. ಇಂಥ ಕಿರಿಕಿರಿಯ ದೇವರುಗಳೆಂಬ ಮಡಕೆಗಳನ್ನು ಕೂಡಲಸಂಗಮದೇವರೆಂಬ ಜ್ಞಾನದ ಬಡಿಗೆಯಿಂದ ಒಡೆದು ಹಾಕಲು ಸೂಚಿಸುತ್ತಾರೆ. ಇಂಥ ದೇವರುಗಳಿಂದ ಬಿಡುಗಡೆ ಹೊಂದಿದಾಗ ಮಾತ್ರ ನಿಜವಾದ ದೇವರ 'ದರ್ಶನ'ವಾಗುವುದು.

ಬಡವರು ಇಂಥ ದೇವರ ಸೇವೆ ಮಾಡುವುದರಲ್ಲೇ ಧನವನ್ನೆಲ್ಲ ಸವೆಸುತ್ತಾರೆ. ಭಯದಲ್ಲೇ ಲಯವಾಗುತ್ತಾರೆ. ತಮ್ಮ ಮತ್ತು ತಮ್ಮ ಮಕ್ಕಳ ಭವಿಷ್ಯವನ್ನು ಇಂಥ ದೇವರುಗಳಿಂದಾಗಿ ಹಾಳುಮಾಡಿಕೊಳ್ಳುತ್ತಾರೆ. ಆದರೆ ಬಸವಣ್ಣನವರ ದೇವರು ಏನನ್ನೂ ಬಯಸುವುದಿಲ್ಲ. "ಕುರಿ ಬೇಡ, ಮರಿ ಬೇಡ, ಬರಿಯ ಪತ್ರೆಯ ತಂದು ಪೂಜಿಸು ನಮ್ಮ ಕೂಡಲಸಂಗಮದೇವನ" ಎಂದು ದೇವಾರಾಧನೆಯ ಸರಳ ಮಾರ್ಗವನ್ನು ತೋರಿಸಿಕೊಡುತ್ತಾರೆ.

ಬಡವರು ಕಷ್ಟಪಟ್ಟು ದೇವರ ಕಾರ್ಯಗಳನ್ನು ಮಾಡಿದರೆ ಶ್ರೀಮಂತರನೇಕರು ಅಹಂಕಾರದಿಂದ ದೇವರ ಕೆಲಸ ಮಾಡುತ್ತಾರೆ.

**"ಹತ್ತು ಮತ್ತರ ಭೂಮಿ, ಬತ್ತದ ಹಯನು, ನಂದಾದೀವಿಗೆಯ**
**ನಡೆಸಿಹೆವೆಂಬುವರ ಮುಖವ ನೋಡಲಾಗದು,**
**ಅವರ ನುಡಿಯ ಕೇಳಲಾಗದು.**
**ಅಂಡಜ, ಸ್ವೇದಜ, ಉದ್ಭಿಜ, ಜರಾಯುಜವೆಂಬ ಪ್ರಾಣಿಗಳಿಗೆ**
**ಭವಿತವ್ಯವ ಕೊಟ್ಟವರಾರೊ?**
**ಒಡೆಯರಿಗೆ ಉಂಡಲಿಗೆಯ ಮುರಿದಿಕ್ಕಿದಂತೆ**
**ಎನ್ನಿಂದಲೇ ಆಯಿತ್ತು, ಎನ್ನಿಂದಲೇ ಹೋಯಿತ್ತು ಎಂಬುವನ ಬಾಯಲ್ಲಿ**
**ಮೆಟ್ಟ ಹುಡಿಯ ಹೊಯ್ಯದೆ ಮಾಬನೆ**
**ಕೂಡಲಸಂಗಮದೇವ."**

ಎಂದು ಅಹಂಕಾರದ ಭಕ್ತಿಯನ್ನು ಅಲ್ಲಗಳೆಯುತ್ತಾರೆ. ಅಹಂಕಾರ ಮತ್ತು ಭಯದಿಂದ ದೇವರನ್ನು ಪೂಜಿಸುವ ಆವಶ್ಯಕತೆ ಇಲ್ಲ ಎಂದು ಬಸವಣ್ಣನವರು ತಿಳಿಸಿದ್ದಾರೆ. ಭಕ್ತಿಯು ಅಂತಃಕರಣದಿಂದ ತುಂಬಿರಬೇಕು ಮತ್ತು ದಾಸೋಹ ಭಾವದಿಂದ ಕೂಡಿರಬೇಕು ಅಂಥವರು ಮಾತ್ರ ಬಸವಣ್ಣನವರ ದೇವರನ್ನು ಆರಾಧಿಸುವ ಯೋಗ್ಯತೆಯನ್ನು ಪಡೆಯುತ್ತಾರೆ. ಅವರೇ ಶರಣರಾಗುತ್ತಾರೆ.

"ಬಯಲ ರೂಪ ಮಾಡುವಾತನೆ ಶರಣನು,
ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ.
ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ?
ಆ ರೂಪ ಬಯಲು ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿಯೆಂಬೆ?
ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರಹುಂಟೆ
ಕೂಡಲಸಂಗಮದೇವಾ.

ಇಂಥ ಶರಣರು ಬಯಲಿಗೆ 'ಇಷ್ಟ'ದ ರೂಪ ಕೊಡುತ್ತಾರೆ. ಆ ಮೂಲಕ ಬಯಲನ್ನು ಅನುಭಾವಿಸುತ್ತಾರೆ. ನಂತರ ಅಲ್ಲಿಗೇ ನಿಲ್ಲದೆ ಆ ಇಷ್ಟಲಿಂಗದ ರೂಪವನ್ನು ಜಂಗಮಲಿಂಗವೆಂಬ ಬಯಲಲ್ಲಿ ಲೀನಗೊಳಿಸುತ್ತಾರೆ. ಹೀಗೆ ಒಳ ಹೊರಗನ್ನು ಒಂದಾಗಿಸುತ್ತಾರೆ.

ಇಂಥ ಒಂದುತನದ ಮೂಲವನ್ನು ತಿಳಿಸುವುದರ ಮೂಲಕ ಬಸವಣ್ಣನವರು ಎಲ್ಲ ರೀತಿಯ ಭೇದಭಾವಗಳನ್ನು ಅಳಿಸಿ ಸರ್ವ ಸಮತೆಯ ದೀಪವನ್ನು ಜನಮನದಲ್ಲಿ ಬೆಳಗಿಸಲೆತ್ನಿಸುವ ಕ್ರಮ ಅನುಪಮವಾಗಿದೆ. ಇಂಥ ಸಮತಾ ಪ್ರಜ್ಞೆಯಿಂದಾಗಿ ಅವರು ಸದಾ ಮಹಿಳೆಯ ಪರ, ದುಡಿಯುವವರ ಪರ, ಬಡವರ ಪರ, ಅಸ್ಪೃಶ್ಯರ ಪರ ಮತ್ತು ಅನೈತಿಕ ಸಂಬಂಧದಿಂದ ಹುಟ್ಟಿದವರ ಪರ ನಿಲ್ಲುತ್ತಾರೆ.

"ಚೆನ್ನಯ್ಯನ ಮನೆಯ ದಾಸನು ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು,
ಇವರಿಬ್ಬರು ಹೊಲದಲು ಬೆರಣಿಗೆ ಹೋಗಿ ಸಂಗವ ಮಾಡಿದರು.
ಇವರಿಬ್ಬರಿಗೆ ಹುಟ್ಟಿದ ಮಗ ನಾನು,
ಕೂಡಲಸಂಗಮದೇವ ಸಾಕ್ಷಿಯಾಗಿ."

ಎಂದು ಹೇಳುವಲ್ಲಿ ಬಸವಣ್ಣನವರ ಅಂತಃಕರಣ ಮತ್ತು ಅವರಿಗೆ ತಮ್ಮ ಮಣಿಹದ ಬಗ್ಗೆ ಇರುವ ದೃಢನಿರ್ಧಾರದ ಅರಿವಾಗುತ್ತದೆ. ಇಂಥ ಕಾರಣಗಳಿಂದಲೇ ಜನಪದ ಕವಿಯೊಬ್ಬ ನಿರಕ್ಷರಿಯಾಗಿದ್ದರೂ ಬಸವ ತತ್ತ್ವವನ್ನು ಅರಿತುಕೊಂಡು 'ಕಲ್ಯಾಣದೊಳಗ ಬಸವಣ್ಣ ಇರುವಾಗ ಕಲ್ಲಿಗ್ಯಾಕ ಕೈಯ ಮುಗಿಯುವೆ' ಎಂದು ಪ್ರಶ್ನಿಸಿದ್ದಾನೆ.

ಬಸವಣ್ಣನವರು ಅತ್ಯಂತ ನಿರ್ಗತಿಕರಲ್ಲೂ ದೇವರನ್ನು ಕಾಣುತ್ತಾರೆ. ಆ ಮೂಲಕ ಸಂವೇದನೆಯ ಸಾಗರವನ್ನೇ ಸೃಷ್ಟಿಸುತ್ತಾರೆ. ಅವರು ಬದುಕನ್ನು ಪ್ರೀತಿಸುವ ಕ್ರಮ ವಿಶ್ವಮಾನ್ಯವಾಗಿದೆ.

"ಕೆದರಿದ ತಲೆಯ, ತೊನೆವ ನಡೆಯ, ಹಣೆಯ ಬುಗುಟಿನ,
ಕರಸ್ಥಲದ ಅನಿಮಿಷದಿಂದ ಬಹಿರಂಗದವಧಾನ ತಪ್ಪಿ,
ಇದಿರುಗೊಯಿಲು ತಾಗಿ ಪುರ್ಬೊಡೆದು,
ಕಣ್ಣು ತರಿದು, ಕಿವಿ ಹರಿದು
ಜೊಲುವ ರಕ್ತಧಾರೆಯ, ಗಾಳಿಯ ಧೂಳಿಯ ಮಳೆಯ ಜೋರಿನ,
ಬೆನ್ನ ಬಾಸುಳದ, ಎಡಬಲದ ಬರಿಯ ತದ್ದಿನ,
ಮುಳ್ಳುದರಹಿನ, ಕಂಕುಳ ಸೀಳ ಕಂಡು
ನೋಡುವ ಜನರು ಬೆರಗಾಗೆ-
ಪೊರವಾರಿನ ಮರೆಯ ದಿಗಂಬರದ ಬಣಗು ಸುರಿಯುತ್ತ,
ಆಪ್ಯಾಯನವರತು, ಬಿದ್ದು ಮೊಳಕಾಲೊಡೆದು,
ಹೊಸ ಹುಣ್ಣಿನ ರಕ್ತದ ಜೋರು ಹರಿದು,
ಮುಂಗಾಲ ಕಣೆ ಒಳೆದು, ಕಣಕಾಲ ಸಂದು ತಪ್ಪಿ,
ಕಿರುಬೆರಳು ಎಡಹಿ, ಹೆಬ್ಬೊಟ್ಟೊಡೆದ ಗಾಯದ,
ಉರುಗು ಟೊಂಕದ, ಪೆರಚು ಗುಂಟನ
ನೋಡಾ ಚೆನ್ನಬಸವಣ್ಣಾ,
ಅತ್ಯಂತ ಮಲಿನ ಕೂಡಲಸಂಗಮದೇವರ ಕುರುಹು ವಿಪರೀತ,
ನೋಡುವಡೆ ಭಯಂಕರವಾಗಿದೆ ನೋಡಯ್ಯಾ"

ಈ ಪ್ರಕಾರವಾಗಿದ್ದು ನಮ್ಮನ್ನು ಪರೀಕ್ಷಿಸುತ್ತಾನೆ ನೋಡಿ ಬಸವಣ್ಣನವರ ದೇವರು. ಸದಾ ತಲ್ಲೀನವಾಗಿ ಮತ್ತು ಜಾಗೃತವಾಗಿ ಪ್ರೀತಿ ಮತ್ತು ಸೇವಾಭಾವದೊಂದಿಗೆ ಈ ದೇವರನ್ನು ಅರಿಯುವ ಯತ್ನ ಮಾಡಬೇಕಾಗಿದೆ.

●

# ಬಸವಾದ್ವೈತ

ಬಸವಾದ್ವೈತವೇ ಲಿಂಗವಂತರ ತತ್ತ್ವಜ್ಞಾನ. ನಿಸರ್ಗರಹಸ್ಯವನ್ನು ತರ್ಕಬದ್ಧವಾಗಿ ಭೇದಿಸುವ ಮೂಲಕ ಬಂದ ಅರಿವಿನ ಮೇಲೆ ನಿಂತ ಈ ತತ್ತ್ವಜ್ಞಾನ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಇದಕ್ಕೆ 'ಚೈತನ್ಯಾತ್ಮಕ ಭೌತಿಕವಾದ' ಎಂದು ಕರೆಯುವೆ. ಈ ಜಗತ್ತು ಚೈತನ್ಯಮಯವಾಗಿದೆ ಎಂಬ ಸತ್ಯವನ್ನು ಅರಿಯಬೇಕು. ಅರಿತ ನಂತರ ಕಾಯಕಜೀವಿಯಾಗಿ ಪಡೆದದ್ದನ್ನು ದಾಸೋಹಂಭಾವದ ಮೂಲಕ ವಿನಿಯೋಗಿಸುತ್ತ ಅಸಹಾಯಕ ಜೀವಿಗಳ ದುಃಖ ನಿವಾರಣೆ ಮಾಡಬೇಕು. ಶಾಂತಿ, ಕರುಣೆ, ಸಮತೆ ಮತ್ತು ಸಮಾಧಾನಗಳೊಂದಿಗೆ ಸರ್ವರೊಳಗೆ ಒಂದಾಗುತ್ತ ವಿಶ್ವಪ್ರೇಮಿಯಾಗಿ ಬದುಕಬೇಕು. ಈ ಕ್ರಮದಲ್ಲಿ ಮಾನವರು ಸಮೂಹಪ್ರಜ್ಞೆಯನ್ನು ಹೊಂದಬೇಕು ಎಂದು ಈ ತತ್ತ್ವಜ್ಞಾನ ಸೂಚಿಸುತ್ತದೆ. ಹೀಗೆ ಬದುಕುವವರನ್ನು ಶಿವಸ್ವರೂಪಿಗಳು ಎಂದು ಕರೆಯಲಾಗುತ್ತದೆ.

ಜಗತ್ತು ದ್ವೈತವಾಗಿದೆ. ಅದೇ ರೀತಿ ನಮ್ಮೊಳಗೂ ದ್ವೈತವೇ ಇದೆ. ನಮ್ಮೊಳಗೆ ದ್ವೈತ ಇದೆ ಏಕೆಂದರೆ ನಾವು ಮತ್ತು ನಮ್ಮೊಳಗಿನ ದೇವರು ಬೇರೆ ಬೇರೆ! ಷಟ್‌ಸ್ಥಲಗಳ ಪ್ರಕಾರ ನಾವು ಇಡೀ ವಿಶ್ವದ ಜೊತೆ ಕೂಡುತ್ತ ಕೂಡುತ್ತ ಕೊನೆಗೆ ಐಕ್ಯಸ್ಥಲದಲ್ಲಿ ನಮ್ಮೊಳಗಿನ ದೇವರ ಜೊತೆ ಸಂಗಮವಾಗುವ ಮೂಲಕ ಬಸವಾದ್ವೈತವನ್ನು ಸಾಧಿಸಬೇಕಾಗುವುದು. ಹೀಗೆ ಲೋಕದ ಜೊತೆ 'ಕೂಡಲ'ವಾಗಿ ನಮ್ಮೊಳಗಿನ ಚೈತನ್ಯರೂಪಿ ದೇವರ ಜೊತೆ 'ಸಂಗಮ'ವಾಗುವುದೇ ಕೂಡಲಸಂಗಮ. ಅಂದರೆ ವಸ್ತು ಮತ್ತು ಚೈತನ್ಯದ ಸಂಗಮವೇ ಕೂಡಲಸಂಗಮ. ತದನಂತರ ಷಟ್‌ಸ್ಥಲವನ್ನೂ ಮೀರಿ ಸಪ್ತಸ್ಥಲವಾದ ನಿರವಯಸ್ಥಲವನ್ನು ಹೊಂದಿ ಬಯಲಾಗಬೇಕಾಗುವುದು.

“ಮೆಲ್ಲ ಮೆಲ್ಲನೆ ಭಕ್ತನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಮಾಹೇಶ್ವರನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಸಾದಿ ಎನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಾಣಲಿಂಗಿ ಎನಿಸಿಕೊಂಬೆ,
ಮೆಲ್ಲ ಮೆಲ್ಲನೆ ಶರಣನೆನಿಸಿಕೊಂಬೆ,
ಮೆಲ್ಲ ಮೆಲ್ಲನೆ ಐಕ್ಯನೆನಿಸಿಕೊಂಬೆ,
ಮೆಲ್ಲ ಮೆಲ್ಲನೆ ಷಟ್‌ಸ್ಥಲವ ಮೀರಿ
ನಿರವಯಸ್ಥಲವನೆಯ್ದುವೆನಯ್ಯಾ
ಕೂಡಲಸಂಗಮದೇವಾ.”

ಎಂದು ಬಸವಣ್ಣನವರು ವಿಶ್ವದಲ್ಲೇ ವಿಶಿಷ್ಟವಾದ ವ್ಯಕ್ತಿತ್ವವಿಕಸನದ ರಹಸ್ಯವನ್ನು ತಿಳಿಸಿದ್ದಾರೆ. ವ್ಯಕಿತ್ವ ವಿಕಸನವು ವೈಯಕ್ತಿಕವಾಗಿರುವುದಿಲ್ಲ. ಇನ್ನೊಬ್ಬರ ಮೇಲೆ ಪ್ರಭಾವ ಬೀರಿಲಿಕ್ಕಾಗಿಯೂ ಇರುವುದಿಲ್ಲ. ವ್ಯಕ್ತಿಯೊಬ್ಬ ತನ್ನ ಕ್ರಿಯೆಯ ಮೂಲಕ ಲೋಕಕಲ್ಯಾಣ ಮಾಡುತ್ತ ವ್ಯಕ್ತಿತ್ವವಿಕಸನ ಹೊಂದುವನು ಹೊರತಾಗಿ ಜ್ಞಾನ ಮತ್ತು ಸಂಪತ್ತನ್ನು ತನಗಾಗಿ ಗಳಿಸುವುದರ ಮೂಲಕ ಅಲ್ಲ. ಹೀಗೆ ಮೊದಲಿನ ಐದು ಸ್ಥಲಗಳಾದ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ ಮತ್ತು ಶರಣ ಸ್ಥಲಗಳಲ್ಲಿ ಮಾನವ ವಿಶ್ವಮಾನವನಾಗುತ್ತಾನೆ. ನಂತರ ಆರನೇ ಸ್ಥಲವಾದ ಐಕ್ಯಸ್ಥಲದಲ್ಲಿ ಹೊರಗೆ ಸ್ಥಿತಿಪ್ರಜ್ಞನಾಗಿ ಒಳಗೆ ಸ್ಥಿತಪ್ರಜ್ಞನಾಗಿ ಅಚ್ಚಲಿಂಗ್ಯಕ್ಯದ ಅನುಭಾವ ಹೊಂದಿರುತ್ತಾನೆ. ಈ ಬದುಕಿನಲ್ಲಿ ಕ್ರಿಯಾಶೀಲವಾಗಿದ್ದುಕೊಂಡೇ ‘ಮೋಕ್ಷ’ವನ್ನು ಸಾಧಿಸುವ ಕ್ರಮವಿದು. ಕೊನೆಗೆ ಸಪ್ತಸ್ಥಲದಲ್ಲಿ ಇಹಲೋಕಯಾತ್ರೆ ಮುಗಿಸಿ ಜೈವಿಕ ಪ್ರಕ್ರಿಯೆಯಂತೆ ಬಯಲಾಗುತ್ತಾನೆ. ಇದುವೆ ನಿರವಯಸ್ಥಲ.

ಹೀಗೆ ಬಸವಣ್ಣನವರು ನಿಸರ್ಗಸತ್ಯದ ಮೂಲಕ ಸಪ್ತಸ್ಥಲಗಳನ್ನು ಗುರುತಿಸಿದ್ದಾರೆ. ಮಾನವ, ಇಡೀ ವಿಶ್ವ ಮತ್ತು ದೇವರನ್ನು ಒಂದಾಗಿಸಿದ್ದಾರೆ. ದ್ವೈತದಿಂದ ಬಸವಾದ್ವೈತವನ್ನು ಸಾಧಿಸುವ ಮಾರ್ಗವಿದು. ಬಸವಾದ್ವೈತದಲ್ಲಿ ನಮ್ಮ ಮತ್ತು ನಮ್ಮೊಳಗಿನ ದೇವರ ಜೊತೆ ನೇರ ಸಂಬಂಧವಿಲ್ಲ. ನಾವು ನಮ್ಮೊಳಗಿನ ದೇವರನ್ನು ಕೂಡಬೇಕೆಂದರೆ ಏಕಾಂತದಿಂದ ಲೋಕಾಂತವನ್ನು ಸಾಧಿಸಲೇಬೇಕು. ಲೋಕವೇ ತಾನಾಗಬೇಕು. “ಲೋಕವೇ ತಾನಾದ ಬಳಿಕ ಏಕಾಂತದ ಹಂಗೇಕಯ್ಯಾ ಚೆನ್ನಮಲ್ಲಿಕಾರ್ಜುನಾ?” ಎಂದು ಅಕ್ಕಮಹಾದೇವಿ ಕೇಳುತ್ತಾಳೆ. ಅಂದರೆ ಜೀವಕಾರುಣ್ಯದಿಂದ ಬದುಕಬೇಕು ಎಂದು ಸೂಚಿಸುತ್ತಾಳೆ. ಹೀಗೆ ಜೀವಕಾರುಣ್ಯದಿಂದ ಬದುಕುವ ಮೂಲಕ ಕ್ರಿಯಾಶೀಲ

ರಾಗಿ ಲೋಕಕ್ಕೆ ಹಿತವನ್ನುಂಟು ಮಾಡಬೇಕು. ಅಂದಾಗ ಮಾತ್ರ ನಾವು ನಮ್ಮೊಳಗಿನ ದೇವರ ಜೊತೆ ಒಂದಾಗುವ ಅರ್ಹತೆಯನ್ನು ಪಡೆಯುತ್ತೇವೆ.

ಹೊರಗಿನ ದ್ವೈತ ಮತ್ತು ಒಳಗಿನ ದ್ವೈತಗಳೆರಡೂ ಸಮಯಾಧೀನವಾಗಿವೆ. ಜಗತ್ತಿನ ಮೂಲತತ್ತ್ವವಾದ ಏಕತೆಯ ಅರಿವಾಗುವವರೆಗೆ ನಮ್ಮಲ್ಲಿ ದ್ವೈತವಿರುತ್ತದೆ. ವಿಶ್ವ ಬದುಕಿರುವವರೆಗೆ ವಿಶ್ವದಲ್ಲಿ ದ್ವೈತವಿರುತ್ತದೆ. ಅದ್ವೈತವಾದ ಅವಿನಾಶ ಚೈತನ್ಯವೇ ಎಲ್ಲದರ ಮೂಲ ಆಗಿರುವುದರಿಂದ ಕೊನೆಯಲ್ಲಿ ಎಲ್ಲವೂ ಬಯಲಾಗಿ ಚೈತನ್ಯಮಯವೇ ಆಗುವುದು. ಈ ಸತ್ಯವನ್ನು ತಿಳಿಸುವಂಥದ್ದೇ ಬಸವಾದ್ವೈತ.

"ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯಾ" ಎಂದು ಬಸವಣ್ಣನವರು ತಿಳಿಸಿದ್ದಾರೆ. ಅವರು 'ನಾನೇ ದೇವರು' ಎಂಬುದನ್ನು ನಿರಾಕರಿಸುತ್ತಾರೆ. 'ನನ್ನೊಳಗೆ ದೇವರಿದ್ದಾನೆ' ಎನ್ನುತ್ತಾರೆ. ನಾವು ನಮ್ಮೊಳಗಿನ ದೇವರ ದಾಸರಾದಾಗ, ಆ ದೇವರೊಡನೆ ಒಂದಾಗುವ ಪ್ರಕ್ರಿಯೆ ಆರಂಭವಾಗುತ್ತದೆ. ಹೀಗೆ ನಮ್ಮೊಳಗೇ ಇರುವ ಸೃಷ್ಟಿಕರ್ತನ ಜೊತೆ ಒಂದಾಗುವ ಮೊದಲು, ಆತನ ಸೃಷ್ಟಿಯ ಭಾಗವಾಗಿರುವ ನಾವು ಇಡೀ ಸೃಷ್ಟಿಯ ಜೊತೆ ಒಂದಾಗಿರಬೇಕಾಗುತ್ತದೆ. ಸಕಲಜೀವಾತ್ಮರ ಜೊತೆ ಆತ್ಮೀಕವಾಗಿ ಒಂದಾಗುತ್ತ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಸ್ಥಲಗಳನ್ನು ದಾಟುವುದ ರೊಳಗೆ ಸಕಲಜೀವಾತ್ಮರಿಗೆ ಲೇಸನೇ ಬಯಸುತ್ತ ಏಕಾತ್ಮದಿಂದ ವಿಕಸನಗೊಂಡು ಲೋಕಾತ್ಮದ ಜೊತೆ ಅದ್ವೈತವನ್ನು ಸಾಧಿಸಿರುತ್ತೇವೆ. ಕೊನೆಗೆ ಐಕ್ಯಸ್ಥಲವನ್ನು ತಲುಪಿದಾಗ ನಮ್ಮೊಳಗಿನ ಪರಮಾತ್ಮನೊಡನೆ ಅದ್ವೈತವನ್ನು ಸಾಧಿಸಿ ಅಚ್ಚಲಿಂಗೈಕ್ಯರಾಗುತ್ತೇವೆ. ಈ ತೆರನಾಗಿ ಅಚ್ಚಲಿಂಗೈಕ್ಯನಾದಾಗ ಏಕಾತ್ಮ, ಲೋಕಾತ್ಮ ಮತ್ತು ಪರಮಾತ್ಮವೆಲ್ಲ ಒಂದಾಗಿ ಬಸವಾದ್ವೈತವಾಗುತ್ತದೆ. ಹೀಗೆ ವ್ಯಷ್ಟಿಮಯ ಏಕಾತ್ಮವು ಸಮಷ್ಟಿಮಯ ಲೋಕಾತ್ಮವಾಗಿ ರೂಪುಗೊಂಡು ಪರಮಾತ್ಮನೊಡನೆ ಐಕ್ಯವನ್ನು ಸಾಧಿಸುತ್ತದೆ.

> **"ಅನಾದಿಯ ಮಗನು ಆದಿ, ಆದಿಯ ಮಗನತೀತ,**
> **ಅತೀತನ ಮಗನು ಆಕಾಶ, ಆಕಾಶನ ಮಗನು ವಾಯು,**
> **ವಾಯುವಿನ ಮಗನಗ್ನಿ, ಅಗ್ನಿಯ ಮಗನು ಅಪ್ಪು,**
> **ಅಪ್ಪುವಿನ ಮಗನು ಪೃಥ್ವಿ,**
> **ಪೃಥ್ವಿಯಿಂದ ಸಕಲ ಜೀವರೆಲ್ಲರು ಉದ್ಭವಿಸಿದರು ಗುಹೇಶ್ವರ."**

ಎಂದು ಅಲ್ಲಮಪ್ರಭುದೇವರು ತಿಳಿಸಿದ್ದಾರೆ. ಸಕಲಜೀವಾತ್ಮರ ಹಾಗೆ ನಾವೆಲ್ಲ ಪೃಥ್ವಿಯಿಂದಲೇ ಜನಿಸಿದ್ದೇವೆ. ನಮ್ಮ ಜಾತಿ, ಕುಲ ಮುಂತಾದ ಭೇದಭಾವಗಳು ಕೃತ್ರಿಮವಾಗಿವೆ.

"ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ
ರೂಪು ನಿರೂಪನೊಡಗೂಡುವ ಪರಿಯಂತು ಹೇಳಾ
ಅಸಂಬಂಧ ಸಂಬಂಧವಾಗಿ ಇದೆ.
ದೇಹ ಇಂದ್ರಿಯವೆಂಬ ಜಾತಿಸೂತಕವಿರಲು
ಗುಹೇಶ್ವರಲಿಂಗವ ಮುಟ್ಟಬಾರದು ಕೇಳವ್ವಾ"

ಎಂದು ಅಲ್ಲಮಪ್ರಭುಗಳು ಅನಂತವಾದುದರ ಕಡೆಗೆ ಗಮನ ಸೆಳೆದಿದ್ದಾರೆ. ಕಣ್ಣಿಗೆ ಕಾಣುವಂಥದ್ದು, ಅಂದರೆ ಹುಟ್ಟಿರುವಂಥದ್ದು ಸಾಯಲೇಬೇಕು. ಬಯಲಿನಿಂದ ಸೃಷ್ಟಿಯಾದ ಪೃಥ್ವಿಯಿಂದಲೇ ಎಲ್ಲವೂ ಮೂಡಿಬಂದಿವೆ. ನಾವೆಲ್ಲ ಮತ್ತೆ ಕೊನೆಗೊಂದು ದಿನ ಪೃಥ್ವಿಯ ಭಾಗವಾಗಿ ಹೋಗುತ್ತೇವೆ. ಒಂದು ದಿನ ಈ ಪೃಥ್ವಿ ಕೂಡ ಬಯಲಾಗುತ್ತದೆ. ಕೊನೆಗೊಂದು ದಿನ ಸೂರ್ಯ, ಚಂದ್ರರ ಸಮೇತ ಸಕಲ ನಕ್ಷತ್ರ, ಗ್ರಹ ಮತ್ತು ಉಪಗ್ರಹಗಳ ಸಮೇತ ಎಲ್ಲವೂ ಬಯಲಿನಲ್ಲಿ ಲೀನವಾಗುತ್ತವೆ. ಆ ಬಯಲೇ ಚೈತನ್ಯ.

ಈ ಪ್ರಕಾರ ಚೈತನ್ಯದಿಂದಾದ ಪ್ರತಿ ವಸ್ತುವಿಗೆ ಅಳಿವಿದೆ. ಆದರೆ ಅದರೊಳಗಿನ ಚೈತನ್ಯಕ್ಕೆ ಅಳಿವಿಲ್ಲ. ಪ್ರತಿವಸ್ತುವಿನ ಒಳಗಿನ ಚೈತನ್ಯವು ಕಾಯಕನಿರತ (ಕ್ರಿಯಾಶೀಲ) ವಾಗಿದೆ. ವಸ್ತು ತನ್ನ ಅಸ್ತಿತ್ವವನ್ನು ಕಳೆದುಕೊಂಡಾಗ ಮತ್ತೆ ಚೈತನ್ಯವಾಗಿ ಬಯಲಾಗುತ್ತದೆ.

"ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂದು ಬಸವಣ್ಣನವರು ಹೇಳುತ್ತಾರೆ. ಇಲ್ಲಿ ಸ್ಥಾವರ ಎಂದರೆ ವಸ್ತು. ಜಂಗಮ ಎಂದರೆ ಅದರೊಳಗಿನ ಚೈತನ್ಯ. "ಸ್ಥಾವರ ಜಂಗಮ ಒಂದೇ" ಎಂದು ಬಸವಣ್ಣನವರು ಇನ್ನೊಂದು ವಚನದಲ್ಲಿ ಹೇಳುತ್ತಾರೆ. ಸ್ಥಾವರ ಎನ್ನಿಸಿಕೊಳ್ಳುವ ವಸ್ತು ಕೂಡ ಚೈತನ್ಯ ಎಂಬ ಜಂಗಮದಿಂದಲೇ ಆಗಿದೆ ಎಂಬುದು ಇದರರ್ಥ. (ಜಂಗಮಕ್ಕೆ ಅನೇಕ ಅರ್ಥಗಳಿವೆ. ಚೈತನ್ಯ ಎಂಬುದು ಅವುಗಳಲ್ಲೊಂದು) ಹೀಗೆ ಚೈತನ್ಯವು ವಸ್ತುವಿನ ರೂಪ ತಾಳುತ್ತದೆ. ಆದರೆ ಅದರೊಳಗೆ ಚೈತನ್ಯವಾಗೇ ಉಳಿದುಕೊಳ್ಳುತ್ತದೆ. ಕಾಲದ ಕಟ್ಟಳೆಯ ಪ್ರಕಾರ ತನ್ನ ಆಯುಷ್ಯ ಮುಗಿದನಂತರ ವಸ್ತುವೊಂದು ಅಳಿದ ನಂತರ ಮತ್ತೆ ಚೈತನ್ಯವಾಗಿ ಮಾರ್ಪಡುತ್ತದೆ. ವಸ್ತುಜಗತ್ತು ಚೈತನ್ಯದೊಳಗೆ ಸೇರಿಕೊಳ್ಳುತ್ತ ಕೊನೆಗೆ ಬಯಲಾಗುವುದೇ ಕಾಸ್ಮಿಕ್ ಡ್ರಾಮಾ (ಲೀಲೆ). ಈ ವಸ್ತು ಮತ್ತು ಚೈತನ್ಯದ ಕಾರಣಪುರುಷನೇ ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ ಕೂಡಲಸಂಗಮದೇವ.

ಲಿಂಗಾಯತ ಧರ್ಮವನ್ನು ಶೂನ್ಯಧರ್ಮ ಅಥವಾ ಬಯಲಧರ್ಮ ಎಂದೂ ಕರೆಯಬಹುದು. ವೈಜ್ಞಾನಿಕ ಮನೋಭಾವದ ಸಮಾಜ ನಿರ್ಮಾಣದಲ್ಲಿ ಈ ಧರ್ಮ ಪ್ರಮುಖ ಪಾತ್ರ ವಹಿಸುತ್ತದೆ.

ಶರಣಸಂಕುಲ ೧೨ನೇ ಶತಮಾನದಲ್ಲಿ ಕ್ರೌರ್ಯಕ್ಕೆ ಬಲಿಯಾದುದರ ಬಗ್ಗೆ ಕೂಲಂಕಷವಾಗಿ ಸಂಶೋಧನೆಯಾಗಬೇಕಿದೆ. ಅದೇ ರೀತಿ ದೇಶದಲ್ಲಿ ಮತ್ತು ಜಗತ್ತಿನಲ್ಲಿ ನಮ್ಮ ಕಾಲಘಟ್ಟದಲ್ಲಿ ನಡೆಯುತ್ತಿರುವ ಕೋಮುವಾದ ಮತ್ತು ಭಯೋತ್ಪಾದಕ ಘಟನೆಗಳ ಹಿಂದೆ ಎಂಥೆಂಥವರು ಇದ್ದಾರೆ ಎಂಬುದನ್ನು ಅರ್ಥೈಸಿಕೊಳ್ಳಬೇಕಿದೆ. ಶರಣ ಸಮಾಜ ವನ್ನು ಮತ್ತೆ ಪಡೆಯುವುದರ ಮೂಲಕ ಭಯೋತ್ಪಾದನೆಯನ್ನು ಸಂಪೂರ್ಣವಾಗಿ ತಡೆಗಟ್ಟಲು ಸಾಧ್ಯ ಎಂಬುದನ್ನು ಜಗತ್ತಿಗೆ ಮನವರಿಕೆ ಮಾಡಿಕೊಡಬೇಕಿದೆ.

●

# ಶರಣರು ಮತ್ತು ಸಮಾನತೆ

ವಚನ ಸಾಹಿತ್ಯ ಎಲ್ಲ ದೃಷ್ಟಿಯಿಂದಲೂ ಆಧುನಿಕ ಸಾಹಿತ್ಯವೇ ಆಗಿದೆ. ಅದರ ಶೈಲಿ ಕೂಡ ಆಧುನಿಕವಾದ ಗದ್ಯಶೈಲಿಗೆ ಸಮೀಪವಾಗಿದೆ. ಅದೇರೀತಿ ಹಾಡುಗಾರಿಕೆಗೆ ಬೇಕಾದ ಅಂಶಗಳನ್ನೂ ಒಳಗೊಂಡಿದೆ. ಹೀಗೆ ಗದ್ಯದ ದೇಹ ಮತ್ತು ಪದ್ಯದ ಜೀವವನ್ನು ಹೊಂದಿರುವ ತ್ರಿವಿಧಸಾಹಿತ್ಯ ಎಲ್ಲಿಯೂ ಕಾಣಸಿಗುವುದಿಲ್ಲ.

ಧರ್ಮಶಾಸ್ತ್ರ, ದರ್ಶನ ಮತ್ತು ಸಾಹಿತ್ಯವೆಂಬ ತ್ರಿವಿಧ ಅಂಶಗಳನ್ನು ವಚನಗಳು ಒಳಗೊಂಡಿವೆ. ಈ ಮೂರೂ ಅಂಶಗಳು ನವಸಮಾಜವೊಂದರ ಸೃಷ್ಟಿಗೆ ಮೂಲಾಧಾರ ವಾಗಿವೆ. ಮೊದಲನೆಯದಾಗಿ ಧಾರ್ಮಿಕ ಸಾಹಿತ್ಯವಾಗಿರುವುದರಿಂದ ಇದರಲ್ಲಿ ಲಿಂಗವಂತ ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರಗಳು ಮೂಡಿಬಂದಿವೆ. ವಚನಸಾಹಿತ್ಯ ಕಾಲಾತೀತವಾದ ಚಿಂತನೆಗಳಿಂದ ಕೂಡಿದ ದರ್ಶನವನ್ನೂ ಒಳಗೊಂಡಿದೆ. ಆ ಮೂಲಕ ತತ್ತ್ವಾರ್ಥ ಮತ್ತು ಬೆಡಗಿನ ಅರ್ಥಗಳನ್ನೂ ಸ್ಫುರಿಸುತ್ತದೆ. ಇದು ಸೃಜನಶೀಲ ಸಾಹಿತ್ಯವೂ ಆಗಿರುವುದರಿಂದ ಶಬ್ದಾರ್ಥದ ಜೊತೆಗೆ ಲಕ್ಷಣಾರ್ಥ ಮತ್ತು ಧ್ವನ್ಯರ್ಥಗಳು ಸಹಜ ವಾಗಿಯೆ ಮೂಡಿಬಂದಿವೆ. ಇವುಗಳ ಜೊತೆಗೇ ಅನ್ಯೋಕ್ತಿ. ಅಲಂಕಾರ, ಪ್ರತಿಮೆ, ಪ್ರತೀಕ ಮುಂತಾದ ಕಾವ್ಯಮೀಮಾಂಸೆಯ ಇತರ ಅಂಶಗಳೂ ಸೇರಿಕೊಂಡಿವೆ.

ಲಿಂಗಾಯತದ ಧರ್ಮಶಾಸ್ತ್ರವೂ ಆಗಿರುವ ವಚನಗಳು ದಾರ್ಶನಿಕವಾಗಿ ಮತ್ತು ಸಾಹಿತ್ಯಕವಾಗಿ ಸಾರ್ವತ್ರಿಕವಾಗಿವೆ. ಅಲ್ಲದೆ ಸಕಲಜೀವಾತ್ಮರ ಬಗೆಗಿನ ಕಾಳಜಿಯಿಂದಾಗಿ ಜನಮನವನ್ನು ಸೂರೆಗೊಳ್ಳುವ ಮೂಲಕ ನವಸಮಾಜಕ್ಕೆ ನಾಂದಿಹಾಡುವಂಥವು ಗಳಾಗಿವೆ. ಹೀಗೆ ವಚನಗಳು ಧರ್ಮಶಾಸ್ತ್ರವೂ ಹೌದು, ದರ್ಶನವೂ ಹೌದು ಮತ್ತು

ಸಾಹಿತ್ಯವೂ ಹೌದು. ಅಷ್ಟೇ ಅಲ್ಲದೆ ಸಾಮಾಜಿಕ ಬದುಕಿನ ಮೇಲೆ ನಡೆ ನುಡಿ ಸಿದ್ಧಾಂತದ ಪರಿಣಾಮ ಬೀರುವ ಸಮಾಜೋ ಧಾರ್ಮಿಕ ಸಂವಿಧಾನವೂ ಹೌದು.

೧೯೩೯ರಿಂದ ೧೯೪೫ರ ವರೆಗೆ ನಡೆದ ಎರಡನೇ ಮಹಾಯುದ್ಧದಲ್ಲಿ ಜಗತ್ತಿನಲ್ಲಿ ಒಟ್ಟು ೫ ಕೋಟಿ ಜನ ಜೀವಕಳೆದುಕೊಂಡರು. ನಂತರ ಜಗತ್ತಿನ ಜನಸಮುದಾಯಗಳಲ್ಲಿ ಮಾನವಹಕ್ಕುಗಳ ಕುರಿತು ವಿಶ್ವಾಸ ಮೂಡಿಸುವ ಮತ್ತು ದೇಶಗಳಿಗೆ ಭದ್ರತೆ ಒದಗಿಸುವ ದೃಷ್ಟಿಯಿಂದ ವಿಶ್ವಸಂಸ್ಥೆಯ ಉದಯವಾಯಿತು. ಆದರೆ ೧೨ನೇ ಶತಮಾನದಲ್ಲಿ ಬಸವಾದಿ ಪ್ರಮಥರು ಇಂಥ ವಿಶ್ವಸಂಸ್ಥೆಯ ಕಾರ್ಯ ನಿರ್ವಹಿಸಿದರು. ಜಾತಿವಿನಾಶಕ್ಕಾಗಿ ಹರಳಯ್ಯ ಮತ್ತು ಮಧುವರಸರ ಮಕ್ಕಳ ಮದುವೆಯನ್ನು ಏರ್ಪಡಿಸಿದಾಗ ಪಟ್ಟಭದ್ರ ಹಿತಾಸಕ್ತಿಗಳು ಶರಣರ ಕಗ್ಗೊಲೆ ಮಾಡಿದವು ಮತ್ತು ವಚನಕಟ್ಟುಗಳನ್ನು ಸುಟ್ಟವು. ಸಹಸ್ರ ಸಹಸ್ರ ಶರಣರು ಕಲ್ಯಾಣ ಬಿಟ್ಟು ದಿಕ್ಕಾಪಾಲಾಗಿ ಹೋಗಬೇಕಾಯಿತು. ಹೀಗೆ ಕಾಯಕಜೀವಿಗಳ ಅನುಭವ, ಅನುಭಾವ ಮತ್ತು ಸಮತಾಸಮಾಜದ ನಿರ್ಮಾಣಕ್ಕಾಗಿ ಶರಣರು ಜೀವದ ಹಂಗುದೊರೆದು ಮಾಡಿದ ಚಳವಳಿ ಮೂಲಕ ಒಡಮೂಡಿದ ಸಾಹಿತ್ಯವೇ ವಚನಸಾಹಿತ್ಯ.

ಇಷ್ಟಲಿಂಗದ ಮೂಲಕ ಒಂದಾದ ತಾವೆಲ್ಲ ಒಂದೇ ಸಂಕುಲದವರೆಂಬುದನ್ನು ಕಾಯಕಜೀವಿಗಳು ಬಸವಣ್ಣನವರ ಅವಿಶ್ರಾಂತ ಪ್ರಯತ್ನದಿಂದ ಅರಿತರು. ಜಾತಿ, ಉಪಜಾತಿ, ವರ್ಣ, ವರ್ಗ ಮತ್ತು ಲಿಂಗಭೇದಗಳು ಮಾನವನಿರ್ಮಿತ ಎಂಬ ಸತ್ಯವನ್ನು ವಚನಗಳ ಮೂಲಕ ಜಗತ್ತಿಗೆ ಸಾರಿದರು. ಹೀಗೆ ಜನಸಾಮಾನ್ಯರು ಎಲ್ಲ ರೀತಿಯ ಭೇದಭಾವಗಳಿಂದ ವಿಮೋಚನೆಗೊಂಡು ಶರಣರಾಗುವ ಮೂಲಕ ನವಮಾನವರೆಂಬ ಹೆಗ್ಗಳಿಕೆಗೆ ಪಾತ್ರರಾದರು. ವೈದಿಕರು ಸೃಷ್ಟಿಸಿರುವ ಶ್ರೇಣೀಕೃತ ಸಮಾಜದಲ್ಲಿ ಇಷ್ಟಲಿಂಗವು ಇಂಥ ಒಂದು ಅನನ್ಯ ಕ್ರಾಂತಿಯನ್ನು ಮಾಡಿತು. ಯಾರ ಎದೆಯಮೇಲೆ ಲಿಂಗವಿದೆಯೊ ಅವರೆಲ್ಲ ಶಿವಸ್ವರೂಪಿಗಳೆಂದು ಬಸವಣ್ಣನವರು ಸಾರಿದರು. ಎಲ್ಲರೂ ಶಿವಸ್ವರೂಪಿಗಳಾದ ಮೇಲೆ ಅವರಲ್ಲಿ ಯಾರೂ ಮೇಲಿಲ್ಲ ಕೀಳಿಲ್ಲ ಎಂಬ ಸತ್ಯದ ಅರಿವು ಲೋಕಕ್ಕೆ ಆಯಿತು. ಇಷ್ಟಲಿಂಗದ ಮುಂದೆ ರಾಜಪುತ್ರರೂ ವೇಶ್ಯಾಪುತ್ರರು ಸಮಾನರಾದರು. ಹೀಗೆ ಇಷ್ಟಲಿಂಗವು ಎಲ್ಲರನ್ನೂ ಒಂದುಗೂಡಿಸುವ ಸಾಧನವಾಯಿತು. ಜನರನ್ನು ಬೇರ್ಪಡಿಸಲೆಂದೇ ವೈದಿಕರು ಹುಟ್ಟಿಸಿದ ೩೩ ಕೋಟಿ ದೇವತೆಗಳನ್ನು ಇಷ್ಟಲಿಂಗ ತನ್ನನ್ನು ನಂಬಿದ ಮಾನವರ ಮನಸ್ಸಿನಿಂದ ಹೊರದಬ್ಬಿತು. ಆಗ ಅವರೆಲ್ಲ ಸ್ವತಂತ್ರ ಮಾನವರಾದರು.

ವೈದಿಕಧರ್ಮದಲ್ಲಿನ ಶ್ರೇಣೀಕೃತ ಸಮಾಜದಲ್ಲಿ ಸಮಗಾರ ಜಾತಿಯವರಾಗಿದ್ದ ಹರಳಯ್ಯನವರು ಇಷ್ಟಲಿಂಗದೀಕ್ಷೆಯ ನಂತರ ಲಿಂಗವಂತರಾದರು. ಆಗ ಸಮಗಾರ ಎಂಬುದು ಜಾತಿಯ ಸಂಕೇತವಾಗಿ ಉಳಿಯದೆ ಕೇವಲ ಕಾಯಕದ ಸಂಕೇತವಾಗಿ ಉಳಿಯಿತು. ಬಿಜ್ಜಳನ ಆಸ್ಥಾನದಲ್ಲಿದ್ದ ಮಧುವರಸರು ಬ್ರಾಹ್ಮಣರಾಗಿದ್ದರು. ಆದರೆ ಲಿಂಗದೀಕ್ಷೆಯ ನಂತರ ಲಿಂಗವಂತರಾದರು. ಹೀಗೆ ಇಬ್ಬರೂ ಬಸವಣ್ಣನವರ ಶರಣಸಂಕುಲದ ಸದಸ್ಯರಾದರು.

ಕುಲಗೋತ್ರಗಳಿಲ್ಲದ, ಜಾತಿ ಉಪಜಾತಿಗಳಿಲ್ಲದ, ಅಸ್ಪೃಶ್ಯತೆ ಇಲ್ಲದ, ವರ್ಗ, ವರ್ಣ ಮತ್ತು ಲಿಂಗಭೇದಗಳಿಲ್ಲದ, ಖಾಸಗಿ ಆಸ್ತಿ ಇಲ್ಲದ ಆದರೆ ಸಮೂಹ ಸಂಪತ್ತಾದ ಶಿವನಿಧಿಯನ್ನು ಹೊಂದಿದ್ದ ಶರಣಸಂಕುಲವು ವಿಶ್ವದ ಮೊಟ್ಟಮೊದಲ ಪರಿಪೂರ್ಣ ಸಮಾನತೆಯನ್ನು ಹೊಂದಿದ ಸಮಾಜವಾಗಿದೆ. ಖಾಸಗಿ ಆಸ್ತಿಯು ಮನುಷ್ಯತ್ವದ ವಿರುದ್ಧವಾಗಿರುತ್ತದೆ. ಮನುಷ್ಯತ್ವವು ಖಾಸಗಿ ಆಸ್ತಿಯ ವಿರುದ್ಧವಾಗಿರುತ್ತದೆ ಎಂಬುದನ್ನು ಮೊಟ್ಟಮೊದಲಬಾರಿಗೆ ಜಗತ್ತಿಗೆ ತೋರಿಸಿಕೊಡುವುದರ ಮೂಲಕ ಯಾವ ವೈರುಧ್ಯವೂ ಇಲ್ಲದ ಶರಣಸಂಕುಲವೆಂಬ ಸರ್ವಸಮತ್ವದ ಸಮಾಜವನ್ನು ನಿರ್ಮಿಸಿದ ಕೀರ್ತಿ ಬಸವಾದಿ ಶರಣರಿಗೆ ಸಲ್ಲುತ್ತದೆ. ಹರಳಯ್ಯ ಮಧುವರಸರು ಲಿಂತವಂತರಾಗುವ ಮೂಲಕ ಇಂಥ ಶರಣಸಂಕುಲದ ಸದಸ್ಯರಾದ ಕಾರಣ, ಹಿಂದೂಧರ್ಮ ಎಂದು ಕರೆಯಿಸಿಕೊಳ್ಳುವ ವೈದಿಕರ ಮನುಧರ್ಮದ ಕಾರಣ ತಮಗೆ ಅಂಟಿಕೊಂಡಿದ್ದ ಕೃತ್ರಿಮ ಜಾತಿ ಮತ್ತು ಮೇಲು ಕೀಳುಗಳೆಂಬ ಅಂತಸ್ತುಗಳನ್ನು ಕಳೆದುಕೊಂಡು ನಿಜಮಾನವರಾದರು. ಆಗ ಅವರಿಗೆ ಯಾವ ಭೇದವೂ ಕಾಣಲಿಲ್ಲ. ಹರಳಯ್ಯನವರ ಮಗ ಶೀಲವಂತ ಮತ್ತು ಮಧುವರಸರ ಮಗಳು ಲಾವಣ್ಯ ಕೂಡ ಲಿಂಗವಂತರಾದ ಕಾರಣ ಅವರ ಮದುವೆ ಸಹಜವಾಗಿಯೇ ಲಿಂಗವಂತರ ಧರ್ಮದ ಪ್ರಕಾರ ಆಯಿತು. ಆದರೆ ಬಿಜ್ಜಳನ ಆಸ್ಥಾನದಲ್ಲಿದ್ದ ಪಟ್ಟಭದ್ರ ಹಿತಾಸಕ್ತಿಗಳು ಆ ಮದುವೆ 'ಧರ್ಮಬಾಹಿರ' ಎಂದು ಹುಯಿಲೆಬ್ಬಿಸಿದವು.

ಮನುಧರ್ಮದ ಪ್ರಕಾರ ಆ ಮದುವೆ ಧರ್ಮಬಾಹಿರ ಆಗಿತ್ತು. ಆದರೆ ನಿರ್ಜಾತಿ ಲಿಂಗವಂತ ಧರ್ಮದ ಪ್ರಕಾರ ಧರ್ಮಸಮ್ಮತವಾಗಿತ್ತು. ಮನುವಾದಿಗಳಿಗೆ ಅದು ಬ್ರಾಹ್ಮಣಕನ್ಯಾ ಮತ್ತು ಸಮಗಾರ ವರನ ಮಧ್ಯೆ ನಡೆಯುವ ಮದುವೆಯಾಗಿತ್ತು. ಶರಣ ಸಂಕುಲದ ಪ್ರಕಾರ ಅದು ಲಿಂಗವಂತರ ಮದುವೆಯಾಗಿತ್ತು.

ಲಿಂಗವಂತ ಧರ್ಮವು ಸನಾತನವಾದಿಗಳ ಚೌಕಟ್ಟಿನ ಮನುಧರ್ಮವಲ್ಲ. ಇದು ಚೌಕಟ್ಟಿಲ್ಲದ ಬಯಲಧರ್ಮ. ಶೂನ್ಯ ಎಂಬುದು ಬಯಲೇ ಆಗಿದೆ. ಇದು ಸಕಲ

ಚರಾಚರಗಳ ಸಮೇತ ಎಲ್ಲವನ್ನೂ ಒಳಗೊಂಡಿದೆ. 'ಎಲ್ಲರೂ ನಮ್ಮವರು. ಯಾರೂ ಹೊರಗಿನವರಲ್ಲ' ಎಂಬುದು ಲಿಂಗವಂತರ ಧರ್ಮವಾದ ಬಸವಧರ್ಮದ ಘೋಷಣೆಯಾದರೆ, ವರ್ಣ, ಜಾತಿ, ಉಪಜಾತಿ, ವರ್ಗ ಮತ್ತು ಲಿಂಗಭೇದ ಸೃಷ್ಟಿಸಿ ನಿರಂತರ ಶೋಷಣೆಯ ಸಮಾಜವನ್ನು ಸೃಷ್ಟಿಸುವುದೇ ಮನುಧರ್ಮದ ಉದ್ದೇಶವಾಗಿದೆ.

ಮಾನವ ಘನತೆ ಮತ್ತು ಮಾನವ ಹಕ್ಕುಗಳಿಗಾಗಿ ಮನುಧರ್ಮದ ಕ್ರೌರ್ಯದ ವಿರುದ್ಧ ಹೋರಾಡಿದ ಶರಣರು, ತಮ್ಮ ತತ್ತ್ವದ ಅನುಷ್ಠಾನಕ್ಕಾಗಿ ಎಲ್ಲವನ್ನೂ ಕಳೆದುಕೊಳ್ಳಲುಸಿದ್ಧರಾದರು. ಹರಳಯ್ಯ ಮಧುವರಸರ ಮಕ್ಕಳ ಮದುವೆಗೆ ವೈದಿಕರ ಮತ್ತು 'ಮನುಧರ್ಮದ ರಕ್ಷಣೆಯೇ ರಾಜಧರ್ಮ' ಎಂದು ಅನಿವಾರ್ಯವಾಗಿ ನಂಬಿದ್ದ ದೊರೆ ಬಿಜ್ಜಳನ ವಿರೋಧವಿದ್ದರೂ ಶರಣರು ಅದರ ಪರಿಣಾಮವನ್ನು ಎದುರಿಸಲು ಸಿದ್ಧರಾಗಿ ಆ ಮದುವೆಯನ್ನು ನೆರವೇರಿಸಿದರು. ಆ ಮದುವೆಯಿಂದಾಗಿ ಕಲ್ಯಾಣದಲ್ಲಿ ಅಲ್ಲೋಲ ಕಲ್ಲೋಲವಾಯಿತು. ಒಂದು ಮದುವೆಗಾಗಿ ಲಕ್ಷಾಂತರ ಶರಣರು ಎಲ್ಲವನ್ನೂ ಕಳೆದುಕೊಂಡು ಸಮತಾ ತತ್ತ್ವದ ರಕ್ಷಣೆ ಮಾಡಿದರು. ನಿರಾಶ್ರಿತರಾಗಿ ಗೊತ್ತುಗುರಿ ಇಲ್ಲದೆ ಹೋದರು. ಆಗ ಸಹಸ್ರಾರು ಶರಣರು ತಮ್ಮ ನಿಜ ಸಂಪತ್ತಾಗಿದ್ದ ವಚನಕಟ್ಟುಗಳ ರಕ್ಷಣೆಗಾಗಿ ಐಹಿಕ ಸಂಪತ್ತನ್ನು ಬಿಟ್ಟು ಕಲ್ಯಾಣವನ್ನು ತೊರೆದರು. 'ನಡೆ ನುಡಿ ಸಿದ್ಧಾಂತ'ದಿಂದ ಕೂಡಿದ ತತ್ತ್ವಕ್ಕಾಗಿ ಬಹಳಷ್ಟು ಸಾತ್ವಿಕರು ಹುತಾತ್ಮರಾಗಲು ಕಾರಣವಾದ 'ಕಲ್ಯಾಣ ಕ್ರಾಂತಿ' ಎಂಬ ಇಂಥ ಘನಘೋರ ಕ್ಷಿಪ್ರಕ್ರಾಂತಿ ಮಾನವ ಚರಿತ್ರೆಯಲ್ಲಿ ಇನ್ನೊಂದಿಲ್ಲ! ಬಿಜ್ಜಳನ ಕಲ್ಯಾಣದಲ್ಲಿ ನಡೆಯಬೇಕಿದ್ದ ಶರಣಕ್ರಾಂತಿಗೆ ತಡೆಯೊಡ್ಡಿದ ವೈದಿಕರ ಮತ್ತು ಸೈನಿಕರ ಕ್ಷಿಪ್ರಕ್ರಾಂತಿ ಇದು.

ವಚನ ಸಾಹಿತ್ಯವು ಭಾರತ ಸಂವಿಧಾನದ ಅಂಶಗಳನ್ನು ಒಳಗೊಂಡಿದೆ. ಅದೇ ರೀತಿ ಮಾನವ ಹಕ್ಕುಗಳ ಎಲ್ಲ ಅಂಶಗಳನ್ನು ಒಳಗೊಂಡಿದೆ. ೧೯೪೮ರಲ್ಲೇ ಡಿಸೆಂಬರ್ ೧೦ರಂದು ನಡೆದ ವಿಶ್ವಸಂಸ್ಥೆಯ ಮಹಾ ಅಧಿವೇಶನದಲ್ಲಿ ೩೦ ಅಂಶಗಳುಳ್ಳ ಮಾನವ ಹಕ್ಕುಗಳನ್ನು ಜಾಗತಿಕ ಘೋಷಣೆಯೊಂದಿಗೆ ಸ್ವೀಕರಿಸಲಾಯಿತು. ಲಿಂಗಭೇದ, ವರ್ಣಭೇದ ಮುಂತಾದ ಅನಿಷ್ಟಗಳನ್ನು ತೊಡೆದುಹಾಕಲು ಯತ್ನಿಸಿತು. ಅನೈತಿಕ ಸಂಬಂಧಗಳಿಂದ ಜನಿಸಿದ ಮಕ್ಕಳ ಹಕ್ಕುಗಳಲ್ಲಿ ಮತ್ತು ಸತಿ-ಪತಿಗಳ ಸಂಬಂಧದಿಂದ ಜನಿಸಿದ ಮಕ್ಕಳಲ್ಲಿ ವ್ಯತ್ಯಾಸವಿಲ್ಲವೆಂದು ವಿಶ್ವಸಂಸ್ಥೆ ಸಾರಿತು.

"ಲಿಂಗವ ಪೂಜಿಸಿ ಫಲವೇನಯ್ಯಾ ಸಮರತಿ, ಸಮಕಳೆ, ಸಮಸುಖವ ಅರಿಯದನ್ನಕ್ಕ" ಎಂದು ಬಸವಣ್ಣನವರು ತಿಳಿಸಿದ್ದಾರೆ. ಲಿಂಗಭೇದ, ವರ್ಣಭೇದ ಮತ್ತು ವರ್ಗಭೇದವನ್ನು ಅಲ್ಲಗಳೆಯುವ ಈ ವಚನವು ಸಮಾನತೆಯ ತತ್ತ್ವವನ್ನು

ಸಾರುತ್ತದೆ. ಹೀಗೆ ಆಧುನಿಕ ಯುಗದ ಸವಾಲುಗಳಿಗೆ ಉತ್ತರವಾಗಿ ವಚನ ಸಾಹಿತ್ಯ ನಿಲ್ಲುತ್ತದೆ. "ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದಬಳಿಕ ಸಾಕ್ಷಾತ್ ಶಿವನೆಂದು ವಂದಿಸಿ, ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೇ ಯೋಗ್ಯ" ಎಂದು ಹೇಳುವ ಮೂಲಕ ಬಸವಣ್ಣನವರು ಅನೈತಿಕವಾಗಿ ಜನಿಸಿದ ಮಕ್ಕಳ ಹಕ್ಕುಗಳನ್ನು ಎತ್ತಿ ಹಿಡಿದಿದ್ದಾರೆ.

ವಚನ ಸಾಹಿತ್ಯವು ಸಮಷ್ಟಿ ಪ್ರಜ್ಞೆಯಿಂದ ಕೂಡಿದ ಸಾಹಿತ್ಯವಾಗಿದೆ. ವಚನಕಾರರು ತಮ್ಮ ವಚನಗಳನ್ನು ಸಮಾಜೋ ಧಾರ್ಮಿಕ ಸಂಸತ್ ಆಗಿದ್ದ ಅನುಭವ ಮಂಟಪದಲ್ಲಿ ಮಂಡಿಸಬೇಕಿತ್ತು. ಅಲ್ಲಿ ಚರ್ಚೆ ನಡೆದ ನಂತರವೇ ಅದಕ್ಕೆ ಧಾರ್ಮಿಕ, ಸಾಹಿತ್ಯಕ ಮತ್ತು ಸಾಮಾಜಿಕ ಮಹತ್ವ ಬರುತ್ತಿತ್ತು. ಈ ರೀತಿ ಸಾಮಾಜಿಕವಾಗುವ ಮತ್ತು ನಡೆ ನುಡಿ ಸಿದ್ಧಾಂತದಿಂದ ಕೂಡಿದ ವಚನಸಾಹಿತ್ಯದಂಥ ಸಾಹಿತ್ಯವೊಂದು ಧರ್ಮಗ್ರಂಥ ವಾಗಿರುವುದು ಜಗತ್ತಿನಲ್ಲಿ ಎಲ್ಲಿಯೂ ಕಾಣಸಿಗುವುದಿಲ್ಲ.

ಜಗತ್ತಿನ ಎಲ್ಲ ಧರ್ಮಗ್ರಂಥಗಳು ದೇವರ ವಾಕ್ಯಗಳಾಗಿವೆ. ದೇವರು ಮನುಷ್ಯರಿಗೆ ಹೇಳಿದ ಕ್ರಮ ಅಲ್ಲಿದೆ. ಆದರೆ ಲಿಂಗವಂತ ಧರ್ಮಗ್ರಂಥ ದೇವರ ವಾಕ್ಯಗಳಿಂದ ಕೂಡಿಲ್ಲ. ಶರಣರ ವಚನಗಳಿಂದ ಕೂಡಿದೆ. ಸತ್ಯಶುದ್ಧ ಶರಣರು ತಮ್ಮೊಳಗಿನ ದೇವರಿಗೆ ಮಾಡಿಕೊಂಡ ನಿವೇದನೆಯೆ ವಚನಗಳು. ತಮ್ಮ ನಡೆ ನುಡಿ ಸಿದ್ಧಾಂತದ ಕುರಿತು ಅವರೆಲ್ಲ ತಮ್ಮೊಳಗಿನ ದೇವರಿಗೆ ವರದಿ ಒಪ್ಪಿಸಿದ್ದಾರೆ.

ಮುಖ್ಯವಾಗಿ ಬಸವಣ್ಣನವರ 'ಷಟ್‌ಸ್ಥಲದ ವಚನಗಳು', ಅಲ್ಲಮಪ್ರಭುದೇವರ 'ಮಂತ್ರಗೋಪ್ಯ' ಮತ್ತು ಚನ್ನಬಸವಣ್ಣನವರ 'ಕರಣಹಸುಗೆ'ಗಳೆಂಬ ಮೂರು ಗ್ರಂಥಗಳನ್ನು ೧೫ನೇ ಶತಮಾನದ ವಚನಸಂಕಲನ ಯುಗದ ಸಂದರ್ಭದಲ್ಲಿ ಸೇರಿಸಿ ಲಿಂಗವಂತರ ಧರ್ಮಗ್ರಂಥ ಎಂದು ಸಾರಲಾಗಿದೆ. ಆದರೆ ೧೨ನೇ ಶತಮಾನದ ಎಲ್ಲ ಶರಣರ ವಚನಗಳು ಲಿಂಗವಂತರ ಧರ್ಮಗ್ರಂಥದ ಭಾಗಗಳು ಎಂಬುದು ಸಮಂಜಸವಾಗಿದೆ.

ಬಸವಣ್ಣನವರ ವಚನಗಳು ಭೂಮಿ ಪ್ರಧಾನವಾಗಿವೆ, ಅಲ್ಲಮಪ್ರಭುಗಳ ವಚನಗಳು ಬಾಹ್ಯಾಕಾಶ ಪ್ರಧಾನವಾಗಿವೆ. ಚನ್ನಬಸವಣ್ಣನವರ ವಚನಗಳು ದೇಹ ಮತ್ತು ಮನಸ್ಸು ಪ್ರಧಾನವಾಗಿವೆ. ಹೀಗೆ ಲಿಂಗವಂತರ ಧರ್ಮಗ್ರಂಥ, ಭೂಮಿ (ಬಸವಣ್ಣನವರ ಲೋಕ ಜ್ಞಾನ), ಬಾಹ್ಯಾಕಾಶ (ಅಲ್ಲಮ ಪ್ರಭುಗಳ ವಿಶ್ವಜ್ಞಾನ) ದೇಹ ಮತ್ತು ಮನಸ್ಸಿನ (ಚನ್ನಬಸವಣ್ಣನವರ ಸ್ವಯಂಜ್ಞಾನ) ಕಡೆಗೆ ಒಯ್ಯುವ ಮಾರ್ಗದರ್ಶಿಯಾಗಿದೆ. ಆದರೆ ಇತರೆ ವಚನಕಾರರ ವಚನಗಳಿಲ್ಲದ ಕಾರಣ ಇದು ಲಿಂಗಾಯತರ ಅಪೂರ್ಣ ಧರ್ಮಗ್ರಂಥವಾಗಿದೆ.

ಹೀಗೆ ವಿಶ್ವಪ್ರಜ್ಞೆಯೊಂದಿಗೆ ಮಾನವ ಹಕ್ಕುಗಳು, ಅಭಿವ್ಯಕ್ತಿ ಸ್ವಾತಂತ್ರ್ಯ, ಜಾತ್ಯತೀತ ಮನೋಭಾವ, ಲಿಂಗಭೇದ, ವರ್ಣಭೇದ ಮತ್ತು ವರ್ಗಭೇದಗಳನ್ನು ಅಲ್ಲಗಳೆಯುವ ಕ್ರಮ, ಕಾಯಕಜೀವಿಗಳ ಸಂಘಟನೆ, ಕಾಯಕಜೀವಿಗಳಿಗೆ ವಯಸ್ಕರ ಶಿಕ್ಷಣ, ದಲಿತ ಮತ್ತು ಮಹಿಳಾ ಶಿಕ್ಷಣ, ಮಂದಿರ ಮತ್ತು ಮೂರ್ತಿಗಳ ನಿರಾಕರಣೆ, 'ಶಿವನ ಸೊಮ್ಮು' ಎಂಬ ಸಾಮಾಜಿಕನಿಧಿ. ಕಾಯಕಜೀವಿಗಳ ಕೇಂದ್ರಿತ ಸಮಾಜ ವ್ಯವಸ್ಥೆ, ಸರ್ವಸಮಾಜ ಗಳಿಗೆ ಅನುಭವ ಮಂಟಪದಲ್ಲಿ ಪ್ರಾತಿನಿಧ್ಯ, ಕಾಯಕ, ಪ್ರಸಾದ ಮತ್ತು ದಾಸೋಹದ ಕುರಿತ ಕ್ರಾಂತಿಕಾರಿ ಪರಿಕಲ್ಪನೆ ಮುಂತಾದವು ಶರಣರ ಕೊಡುಗೆಗಳಾಗಿವೆ.

ಕಾಯಕ, ಪ್ರಸಾದ ಮತ್ತು ದಾಸೋಹ ಪದಗಳು ಧರ್ಮಶಾಸ್ತ್ರದ ಪದಗಳಷ್ಟೇ ಅಲ್ಲದೆ ಅರ್ಥಶಾಸ್ತ್ರದ ಪದಗಳೂ ಆಗಿವೆ. ಕಾಯಕ ಎಂಬುದು ಯೋಗ್ಯ ಉತ್ಪಾದನೆ, ಪ್ರಸಾದ ಎಂಬುದು ಸದ್ಬಳಕೆ ಹಾಗೂ ದಾಸೋಹ ಎಂಬುದು ಸಮಾಜದಲ್ಲಿ ಯೋಗ್ಯ ವಿತರಣೆ ಹೀಗೆ ಬಸವ ಧರ್ಮದ ಈ ಪದಗಳು ಬಸವಣ್ಣನವರ ಅರ್ಥಶಾಸ್ತ್ರದ ಪದಗಳೂ ಆಗಿವೆ.

'ಕಾಯಕವೇ ಕೈಲಾಸ' ಎಂಬುದು ಕಾಯಕಜೀವಿಗಳ ಈ ಧರ್ಮದ ಮಹಾವಾಕ್ಯ ಗಳಲ್ಲಿ ಒಂದಾಗಿದೆ. ಕಾಯಕದಲ್ಲಿ ತೊಡಗುವುದರ ಮೂಲಕ ವ್ಯಕ್ತಿಯೊಬ್ಬ ತನ್ನ ಅರಿವಿನ ವಿಸ್ತಾರದೊಂದಿಗೆ ಉತ್ಪಾದನಾ ವ್ಯವಸ್ಥೆಯ ಭಾಗವಾಗುತ್ತಾನೆ. ತಾನು ಉತ್ಪಾದಿಸಿ ದ್ದನ್ನು ಸದ್ಬಳಕೆ ಮಾಡುವುದರ ಮೂಲಕ ಜಗತ್ತಿಗೆ ಆ ವಸ್ತುವಿನ ಮಹತ್ವವಿರುವುದನ್ನು ಕಂಡುಕೊಳ್ಳುತ್ತಾನೆ. ದಾಸೋಹದಲ್ಲಿ, ತನಲ್ಲಿ ಕೂಡಿಸಿಟ್ಟಿರುವ ವಸ್ತುಗಳ ಸಾಮಾಜಿಕ ವಿತರಣೆಗೆ ಸಿದ್ಧನಾಗುತ್ತಾನೆ.

ಆಧುನಿಕ ಜಗತ್ತಿನ ಅರ್ಥವ್ಯವಸ್ಥೆ ಹದಗೆಡುತ್ತಿದೆ. ಇಂಥ ಪರಿಸ್ಥಿತಿಯಲ್ಲಿ ಬಸವಣ್ಣನವರ ಅರ್ಥಶಾಸ್ತ್ರ ಹೊಸ ರೀತಿಯಲ್ಲಿ ಸರ್ವಸಮತ್ವಭಾವದೊಂದಿಗೆ ಬದುಕುವುದನ್ನು ಕಲಿಸುತ್ತದೆ. ಶರಣರು ವೈಯಕ್ತಿಕ ಸಂಪತ್ತನ್ನು ಶಿವನಿಧಿಯ ಭಾಗವಾಗಿಸಿ ಸಮಾಜದಲ್ಲಿ ಯಾರೂ ಅಸಹಾಯಕರಾಗಿ ಬಳಲದಂತೆ ನೋಡಿಕೊಳ್ಳುತ್ತಿದ್ದರು.

'ಸಕಲಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು' ಎಂದು ಹೇಳುವಲ್ಲಿ ಬಸವಣ್ಣನವರ ಜೀವಕಾರುಣ್ಯ ಎದ್ದು ಕಾಣುತ್ತದೆ. ಮಾನವ ಈ ಜಗತ್ತಿನ ಕೇಂದ್ರಬಿಂದು ಅಲ್ಲ, ಸಕಲ ಜೀವಾತ್ಮರಿಂದ ಕೂಡಿದ ಜೀವ ಜಾಲವೇ ಈ ಜಗತ್ತಿನ ಕೇಂದ್ರಬಿಂದು ಎಂಬುದನ್ನು ಬಸವಣ್ಣನವರು ಈ ವಚನದಲ್ಲಿ ಸೂಚಿಸಿದ್ದಾರೆ. ಆಧುನಿಕ ಪರಿಸರ ವಿಜ್ಞಾನಿಗಳು ೨೦ನೇ ಶತಮಾನದಲ್ಲಿ ಹೇಳಿದ್ದನ್ನು

ಬಸವಣ್ಣನವರು ೧೨ನೇ ಶತಮಾನದಲ್ಲೇ ಹೇಳಿದ್ದಾರೆ. 'ಜೀವಜಾಲದಲ್ಲಿದೆ ಚರಾಚರವೆಲ್ಲ' ಎಂದು ಬಸವಣ್ಣನವರು ಹೇಳುವಮೂಲಕ ಪರಿಸರದ ಮಹತ್ವವನ್ನು ಸಾರಿದ್ದಾರೆ.

ಕಾಯಕಜೀವಿಗಳು ವಸ್ತುಗಳ ಉತ್ಪಾದನೆ ಮಾಡುತ್ತಲೇ ತತ್ತ್ವ, ಸಾಹಿತ್ಯ ಮತ್ತು ಸಾಮಾಜಿಕ ನ್ಯಾಯಕ್ಕೆ ಬದ್ಧವಾಗಿರುವಂಥ ಸಾಹಿತ್ಯ ರಚನೆ ಮಾಡಿದ್ದು ನಮಗೆಲ್ಲ ಮಾದರಿಯಾಗಿದೆ. ೨೧ನೇ ಶತಮಾನದ ಹಾಹಾಕಾರವನ್ನು ತಡೆಗಟ್ಟಲು ಮತ್ತು ಸರಳ ಸಹಜವಾದ ಸಮೃದ್ಧ ಬದುಕನ್ನು ಕಟ್ಟಲು ವಚನಗಳು ಬಹಳ ಅವಶ್ಯವಾಗಿವೆ. ಹೀಗೆ ವಚನ ಸಾಹಿತ್ಯ ಆಧುನಿಕ ಯುಗದಲ್ಲೂ ಪ್ರಸ್ತುತವಾಗಿದೆ.

ಬಸವಣ್ಣನವರು ಮಾನವಕುಲದ ವಿಮೋಚಕರಾಗಿದ್ದಾರೆ. ಮಾನವ ಕುಲದ ವಿಮೋಚಕರಾಗಬೇಕಾದರೆ ಮಾನವರು ಮೊದಲಿಗೆ ತಮ್ಮನ್ನು ಅರಿತುಕೊಳ್ಳಬೇಕು. ಸತಿಪತಿ ಮಧುರಭಾವದ ಮಹತ್ವವನ್ನು ತಿಳಿದುಕೊಳ್ಳಬೇಕು. ಆ ಮೂಲಕ ಮಧುರಭಕ್ತಿಯ ಸಂಸ್ಕಾರ ಪಡೆಯಬೇಕು. ಆ ಮಧುರಭಕ್ತಿಯು ಅವರಿಬ್ಬರೊಳಗೆ ಶಾಂತಿ ಸಮಾಧಾನ ತರುವಂಥದ್ದಾಗಿರಬೇಕು. ಈ ಶಾಂತಿ ಸಮಾಧಾನದ ಸಂಸ್ಕಾರವು ಇಡೀ ಕುಟುಂಬವನ್ನು ಆವರಿಸಬೇಕು. ಮಕ್ಕಳು ಬೆಳೆಯಲು ಇಂಥ ಸಂಸ್ಕಾರ ಸಹಕಾರಿಯಾಗುವಂಥ ವಾತಾವರಣ ಮನೆಯಲ್ಲೇ ನಿರ್ಮಾಣವಾಗಬೇಕು. ಹೀಗೆ ಮಧುರಭಾವವು ಕುಟುಂಬ ವನ್ನು ಆವರಿಸಿದಾಗ ಮಕ್ಕಳು ಸುಸಂಸ್ಕೃತರಾಗಿ ಬೆಳೆಯುವರು. ನಂತರ ಸಮಾಜದಲ್ಲಿ ಬೆಳೆಯುವಾಗ ಅವರ ನಡತೆಯೇ ಶಾಂತಿ ಸಮಾಧಾನಕ್ಕೆ ಪೂರಕವಾಗಿರುವುದರಿಂದ ಸಹಜವಾಗಿಯೇ ಸಾಮಾಜಿಕ ನೆಲೆಯಲ್ಲಿ ಸಂಸ್ಕೃತಿ ಮತ್ತು ನಾಗರೀಕತೆಯ ವಿಕಸನಕ್ಕೆ ತಮ್ಮ ಅಳಿಲು ಸೇವೆ ಸಲ್ಲಿಸುವರು. ಇಂಥ ಸಮಾನತೆಯ ಪ್ರಜ್ಞೆ ಮೂಡಿಸುವ ವ್ಯಕ್ತಿತ್ವ ವಿಕಸನ ಹೊಂದಿದವರೇ ಶರಣರು.

ಇಂಥವರು ಯಾವ ದೇಶದಲ್ಲೇ ಇದ್ದರೂ ಕಳ್ಳರಾಗಿರುವುದಿಲ್ಲ; ಕೊಲೆಗಡುಕ ರಾಗಿರುವುದಿಲ್ಲ; ಸುಳ್ಳು ಹೇಳುವವರಾಗಿರುವುದಿಲ್ಲ; ಸಿಟ್ಟಿನ ಕೈಗೆ ಬುದ್ಧಿಯನ್ನು ಕೊಡುವ ವರಾಗಿರುವುದಿಲ್ಲ; ತಮ್ಮನ್ನೇ ಹೊಗಳಿಕೊಳ್ಳುವಂಥ ಆತ್ಮರತಿಯಲ್ಲಿ ತೊಡಗಿರುವುದಿಲ್ಲ; ಪರನಿಂದೆಯನ್ನು ಮಾಡುವವರಾಗಿರುವುದಿಲ್ಲ; ಬೇರೆಯವರು ಟೀಕಿಸಿದಾಗ ಅವರು ಟೀಕಿಸಿದರೇಕೆ ಎಂಬುದಕ್ಕೆ ಕಾರಣವನ್ನು ಹುಡುಕದೆ ಪ್ರತಿಯಾಗಿ ಟೀಕಿಸುವ ಅನಾಗರೀ ಕತೆಯನ್ನು ಪ್ರದರ್ಶಿಸುವವರಾಗಿರುವುದಿಲ್ಲ. ಇಂಥ ವ್ಯಕಿತ್ವವುಳ್ಳವರೇ ಶರಣರು.

ಹೀಗೆ ಬದುಕುವುದರಿಂದ ಅಂತರಂಗ ಶುದ್ಧಿಯಾಗುತ್ತದೆ. ಬಹಿರಂಗದಲ್ಲಿ ಸಮಾಜದ ಶುದ್ಧಿಯಾಗುತ್ತದೆ. ಇಂಥ ಜೀವನಕ್ರಮದಿಂದ ಮಾತ್ರ ದೇವರನ್ನು ಒಲಿಸಲು

ಸಾಧ್ಯ ಎಂಬುದು ಬಸವಣ್ಣನವರ ದೃಢನಿರ್ಧಾರವಾಗಿದೆ. ಈ ಮಾತಿನಲ್ಲಿ ವ್ಯಕ್ತಿ, ಕುಟುಂಬ, ಸಮಾಜ, ದೇಶ ಮತ್ತು ವಿಶ್ವದ ಸಂಬಂಧವನ್ನು ಹೊಸೆಯುವ ಶಕ್ತಿ ಇದೆ. ಇಂಥ ಶರಣರು ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುತ್ತಾರೆ. ಹೀಗೆ ಲೇಸನ್ನೇ ಬಯಸುವುದರಲ್ಲಿ ಶಾಂತಿ, ಪ್ರೀತಿ ಮತ್ತು ಸಮಾನತೆಯ ತತ್ತ್ವ ಅಡಗಿದೆ. ವ್ಯಕ್ತಿಯಿಂದ ವಿಶ್ವದವರೆಗೆ ಜೀವಜಾಲದ ಸಂಬಂಧ ಅಡಗಿದೆ.

ಇಂಥ ಶರಣರಿದ್ದ ದೇಶ ಪಾವನವಾಗುತ್ತದೆ. ಅದುವೇ ವಿಶ್ವಶಾಂತಿಗೆ ಕಾರಣ ವಾಗುತ್ತದೆ. ಹೀಗೆ ಇಷ್ಟಲಿಂಗದಿಂದ ಒಳಗಿನ ಸಂಸ್ಕಾರ ಪಡೆದು 'ಜಂಗಮಲಿಂಗ'ದ ಅಂದರೆ ಸರ್ವಸಮತ್ವಭಾವದಿಂದ ಕೂಡಿದ ಸಮಾಜವೆಂಬ ದೇವರಸೇವೆ ಮಾಡಲು ಸಾಧ್ಯವಾಗುತ್ತದೆ. ವ್ಯಷ್ಟಿಯಿಂದ ಸಮಷ್ಟಿಯವರೆಗೆ ಸರ್ವಸಮತ್ವದ ಪ್ರಜ್ಞೆಯಿಂದ ಮತ್ತು ಪ್ರೇಮಭಾವದಿಂದ ಬದುಕುವುದೇ ಮಧುರಭಕ್ತಿ. ದಯವನ್ನೇ ಧರ್ಮದ ಮೂಲವಾಗಿಸಿ ವಿಶ್ವಕಲ್ಯಾಣವನ್ನು ಸಾಧಿಸುವ ಭಕ್ತಿ. ಹಳೆಯ ಸಾಮಾಜಿಕ ವ್ಯವಸ್ಥೆ ಇಂಥ ಮಧುರಭಕ್ತಿಯ ಸಾಧನೆಗೆ ತೊಡಕಾಗುವುದನ್ನು ಬಸವಣ್ಣನವರು ಗಮನಿಸಿದರು. ಹಳೆಯ ವ್ಯವಸ್ಥೆ ಯಿಂದಾಗಿ ಬಹುಪಾಲು ಜನಸಾಮಾನ್ಯರ ಬದುಕು ಕಷ್ಟಕರವಾಗಿತ್ತು. ಜಾತಿಭೇದದ ಕಾರಣ ಮೇಲ್ಜಾತಿಯವರು ಕೆಳಜಾತಿಯವರನ್ನು ಮುಟ್ಟಿಸಿಕೊಳ್ಳದಿರುವುದು, ಹೆಣ್ಣು ಗಂಡಿನ ಮಧ್ಯದ ಭೇದಭಾವದಿಂದಾಗಿ ಹೆಣ್ಣನ್ನು ಕೀಳಾಗಿ ನೋಡುವುದು. ಬಡವರು ಮತ್ತು ಉಳ್ಳವರು ಎಂಬ ಭೇದದಿಂದ ಬಡವರನ್ನು ಕೀಳಾಗಿ ನೋಡುವುದು. ಮಹಿಳೆ ಯರು, ಕೆಳಜಾತಿ ಮತ್ತು ಹಿಂದುಳಿದ ಜಾತಿಗಳಿಗೆ ಅಂದರೆ ಒಟ್ಟಾರೆ ಎಲ್ಲಾ ಮಹಿಳೆಯರು ಮತ್ತು ಶೂದ್ರ ವರ್ಣದಲ್ಲಿ ಹುಟ್ಟಿದವರಿಗೆ ಶಿಕ್ಷಣವನ್ನು ಕೊಡದಿರುವುದು. ಎಲ್ಲರೀತಿ ಯಿಂದಲೂ ಅವರು ಸದಾ ಸೇವಕರಾಗಿಯೇ ಇರುವಂತೆ ನೋಡಿಕೊಳ್ಳುವುದು. ಅಸಮಾನತೆಯ ಸಮಾಜದಲ್ಲಿ ಕಾಯಕಜೀವಿಗಳ ಶೋಷಣೆ ಮಾಡುತ್ತ ಐಹಿಕ ಸುಖವನ್ನು ಅನುಭವಿಸುತ್ತ ದಾಸಿಯರನ್ನು ಮತ್ತು ವೇಶ್ಯೆಯರನ್ನು ಸುಖದ ಸಾಧನಗಳಾಗಿ ಬಳಸಿಕೊಳ್ಳುವುದು ಸಾಮಾನ್ಯವಾಗಿತ್ತು.

ಪುರೋಹಿತಶಾಹಿಗಳು, ಅಧಿಕಾರಶಾಹಿಗಳು ಮತ್ತು ಕುಲೀನರು ಎನ್ನಿಸಿಕೊಳ್ಳು ವವರು ಯಥಾಸ್ಥಿತಿವಾದಿಗಳಾಗಿ ಬದುಕುವುವಂಥ ಸಮಾಜವನ್ನು ಕಳೆದ ಐದುಸಾವಿರ ವರ್ಷಗಳಿಂದ ಪೋಷಿಸಿಕೊಂಡು ಬರಲಾಗಿತ್ತು. ಇಂಥವರ ಸುಖಲೋಲುಪತೆಗೆ ತಕ್ಕಂತೆ ಲೈಂಗಿಕಶಿಲ್ಪಗಳಿಂದ ಕೂಡಿದ ಬೃಹತ್ ದೇವಾಲಯಗಳನ್ನು ನಿರ್ಮಿಸುವುದು; ಆ ದೇವಾಲಯಗಳನ್ನು ದೇವದಾಸಿಯರಿಂದ ಕೂಡಿದ ಸುಖದ ತಾಣಗಳನ್ನಾಗಿಸುವುದು ಮತ್ತು ಮೃಷ್ಟಾನ್ನಭೋಜನ, ಹಾಡು, ಕುಣಿತ, ರಸಿಕತೆ ಮತ್ತು ಧನಕನಕ ಸಂಪತ್ತಿನ

ರಕ್ಷಣಾ ತಾಣವನ್ನಾಗಿ ದೇವಾಲಯಗಳನ್ನು ಬೆಳೆಸುತ್ತ ಪಟ್ಟಭದ್ರರು ರಾಜ್ಯಸತ್ತೆಯನ್ನು ಕೂಡ ತಮ್ಮ ಅಂಕಿತದಲ್ಲಿಟ್ಟುಕೊಳ್ಳುವಂಥ ಸಾಮರ್ಥ್ಯ ಪಡೆದದ್ದನ್ನು ಬಸವಣ್ಣನವರು ಗಮನಿಸಿದರು. ರಾಜಸ್ಥಾನದಿಂದ ಅಷ್ಟೇ ಅಲ್ಲದೆ ದೇವಸ್ಥಾನದಿಂದಲೂ ಕಾಯಕಜೀವಿಗಳ ನಿರಂತರ ಶೋಷಣೆ ನಡೆಯುತ್ತಿರುವುದನ್ನು ಕೊನೆಗೊಳಿಸಿದರು. ದೇಗುಲಸಂಸ್ಕೃತಿಗೆ ತಿಲಾಂಜಲಿಯನ್ನಿಟ್ಟು ಭಕ್ತಿಸಾಮ್ರಾಜ್ಯದ ಸ್ಥಾಪನೆಗೆ ಪಣತೊಟ್ಟರು.

ಬಸವಣ್ಣನವರ ಭಕ್ತಿಸಾಮ್ರಾಜ್ಯ ಸರ್ವಸಮತ್ವದ ಮೇಲೆ ನಿಂತಿದೆ. ಅಂದರೆ ಅಲ್ಲಿ ಅಸ್ಪೃಶ್ಯತೆ ಇಲ್ಲ, ಜಾತಿಭೇದವಿಲ್ಲ, ಕಾಯಕಭೇದವಿಲ್ಲ, ಲಿಂಗಭೇದವಿಲ್ಲ, ವರ್ಣ ಮತ್ತು ವರ್ಗಭೇದಗಳಿಲ್ಲ. ಇಂಥ ಭಕ್ತಿಸಾಮ್ರಾಜ್ಯದ ಸಮಾಜಕ್ಕೆ ಬಸವಣ್ಣನವರು ಶರಣಸಂಕುಲವೆಂದು ಕರೆದರು. ಶರಣರು ಸರ್ವಸಮಾನತೆಯ ವಕ್ತಾರರಾಗಿ ನುಡಿದಂತೆ ನಡೆದು ಬದುಕಿ ತೋರಿಸಿದರು. 'ಜಾತಿ ಸಂಕರವಾದ ಬಳಿಕ ಕುಲವನರಿಸುವರೆ' ಎಂದು ಬಸವಣ್ಣನವರು ಪ್ರಶ್ನಿಸಿದರು. ವರ್ಗ, ವರ್ಣ ಮತ್ತು ಲಿಂಗಭೇದಕ್ಕೆ ಕುಲಭೇದವೇ ಮೂಲವಾಗಿರುವುದನ್ನು ಕಂಡುಕೊಂಡರು. ಇಂಥ ಯಾತನಾಮಯವಾದ ವ್ಯವಸ್ಥೆಗೆ 'ವರ್ಣವ್ಯವಸ್ಥೆ' ಎಂದು ಮನುವಾದಿಗಳು ಕರೆಯುತ್ತಾರೆ.

ಈ ವರ್ಣವ್ಯವಸ್ಥೆಯು ಕರ್ಮಸಿದ್ಧಾಂತದ ಮೇಲೆ ನಿಂತಿದೆ. ಕರ್ಮಸಿದ್ಧಾಂತದ ತಾಯಿಬೇರನ್ನು ಕೊಚ್ಚಿಹಾಕದೆ ವರ್ಣವ್ಯವಸ್ಥೆಯನ್ನು ನಿರ್ನಾಮ ಮಾಡಲು ಸಾಧ್ಯವಿಲ್ಲ. ಕರ್ಮಸಿದ್ಧಾಂತವು ಮೂಢನಂಬಿಕೆಯ ಆಗರವಾಗಿದೆ; ಶೋಷಣೆಯ ಮೂಲವಾಗಿದೆ; ಭೇದಭಾವದ ಗಂಗೋತ್ರಿಯಾಗಿದೆ. ಈ ಕರ್ಮಸಿದ್ಧಾಂತವು ಲೋಕಕ್ಕೆ ಪುಣ್ಯ, ಮೋಕ್ಷ ಮತ್ತು ಸ್ವರ್ಗದ ಆಸೆ ಹಚ್ಚಿಸಿದೆ. ಪಾಪ ಮತ್ತು ನರಕದ ಭಯ ಹುಟ್ಟಿಸಿದೆ. 'ಭಯವೇ ಧರ್ಮದ ಮೂಲ' ಎನ್ನುವಂತೆ ಧರ್ಮದ ರೂಪುರೇಷೆಗಳನ್ನು ಸೃಷ್ಟಿಸಲು ಸಹಕಾರಿಯಾಗಿದೆ. ಮಾನವನ ಸುಖ ಮತ್ತು ದುಃಖಗಳು ಪೂರ್ವನಿರ್ಧಾರಿತ ಎಂಬ ಭ್ರಮೆಯನ್ನು ಸೃಷ್ಟಿಸಿದೆ. ಇದು ಶುಭಗಳಿಗೆ, ಇದು ಕೆಟ್ಟ ಗಳಿಗೆ ಎಂದು ಕಾಲನಿರ್ಣಯ ಮಾಡಿದೆ. ನಮ್ಮ ಹಸ್ತರೇಖೆಗಳು ನಮ್ಮನ್ನು ಭವಿಷ್ಯದ ಕಡೆಗೆ ಒಯ್ಯುವ ದಾರಿಪಟ ಎಂಬ ನಂಬಿಕೆಗೆ ಕಾರಣವಾಗಿವೆ. ಜನ್ಮಜನ್ಮಾಂತರಗಳಲ್ಲಿ ರಾಶಿಯಾಗುತ್ತ ಬಂದಿರುವ ಸಂಚಿತ ಕರ್ಮ, ಹಿಂದಿನ ಜನ್ಮದ ಪ್ರಾರಬ್ಧ ಕರ್ಮ ಮತ್ತು ಮುಂಬರುವ ಜನ್ಮದಲ್ಲಿ ಬರುವ ಆಗಾಮಿ ಕರ್ಮಗಳ ಸುಳ್ಳುಸೃಷ್ಟಿಯ ಮೂಲಕ ಮಾನವ ಸಮಾಜ ಎಂದೆಂದೂ ಬದಲಾಗದೆ ಮನೋರೋಗಿಗಳ ತಾಣವಾಗುವಂತೆ ನೋಡಿಕೊಂಡಿದೆ.

ದೇವಸ್ಥಾನ ಸಂಸ್ಕೃತಿಯು ಅಸ್ಪೃಶ್ಯತೆ, ಅಸಮಾನತೆ, ಭೇದಭಾವ ಮತ್ತು ಮೂಢ ನಂಬಿಕೆಯ ರಕ್ಷಣಾ ಸ್ಥಾನವಾಗಿದೆ. ಬಡವರ ಶೋಷಣೆ ಮತ್ತು ಶ್ರೀಮಂತರ ಅಭಿವೃದ್ಧಿಗೆ

ಕಾರಣವಾಗಿದೆ. ಈ ಕಾರಣದಿಂದಲೇ ಶೋಷಕವರ್ಗ ದೇವಾಲಯಗಳನ್ನು ನಿರ್ಮಿಸಿತು. ಶೋಷಿತವರ್ಗ ಆ ದೇವರುಗಳ ಮುಂದೆ ನಿಂತು ತಮ್ಮ ದುಃಖ ನಿವಾರಣೆಗೆ ಯತ್ನಿಸಿತು. ಹೀಗೆ ಶೋಷಕರ ವಾಸ್ತವ ಮತ್ತು ಶೋಷಿತರ ಭ್ರಮೆಗಳು ಒಟ್ಟೊಟ್ಟಿಗೆ ಸಾಗುತ್ತಿರುವುದನ್ನು ಬಸವಣ್ಣನವರು ಗಮನಿಸಿದರು. "ಉಳ್ಳವರು ಶಿವಾಲಯ ಮಾಡಿಹರು, ನಾನೇನು ಮಾಡಲಿಬಡವನಯ್ಯಾ" ಎಂದು ಬಡವರ ಪರವಾಗಿ ನಿಂತರು. ಉಳ್ಳವರು ಶಿವಾಲಯಗಳನ್ನೇಕೆ ನಿರ್ಮಿಸುವರು? ಎಂಬ ರಹಸ್ಯವನ್ನು ಬಹಿರಂಗಪಡಿಸಿದರು. "ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲ ಸಲುಗೆವಂತರಾಗಿ ಒಳಗೈದಾರೆ. ಆನು ದೇವಾ ಹೊರಗಣವನು" ಎಂದು ತಾವು ಗುಡಿಸಂಸ್ಕೃತಿಯಿಂದ ದೂರವಾದವರು ಎಂಬುದನ್ನು ಬಸವವಣ್ಣನವರು ಸ್ಪಷ್ಟಪಡಿಸಿದರು. "ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಸ್ಥಾವರ ದೈವಕ್ಕೆರಗಲಾಗದು" ಎಂದು ಎಚ್ಚರಿಸಿದರು. "ವೇದ, ಶಾಸ್ತ್ರ ಆಗಮಂಗಳ ನೋದಿದವರು ಹಿರಿಯರೆ? .. .. ..ಸುವಿದ್ಯವ ಕಲಿತ ಡೊಂಬನೇನು ಕಿರಿಯನೆ?" ಎಂದು ಪ್ರಶ್ನಿಸಿ ಕಟ್ಟಕಡೆಯ ಮನುಷ್ಯನ ಮತ್ತು ಆತನ ಜೀವನಾನುಭವದ ಪರವಾಗಿ ನಿಂತರು. ಗಿಳಿಪಾಠದ ಶಾಸ್ತ್ರಪಂಡಿತರು ಅದು ಹೇಗೆ ಹಿರಿಯರಾಗುತ್ತಾರೆ ಎಂದು ಪ್ರಶ್ನಿಸಿದರು. "ಮನೆಯೊಳಗೆ ಕತ್ತಲೆ ಹರಿಯದೊಡಾ ಜ್ಯೋತಿಯದೇಕೊ? .. ..ಕರ್ಮ ಹರಿಯದೊಡಾ ಪೂಜೆಯದೇಕೊ?" ಎಂದು ಕರ್ಮಸಿದ್ಧಾಂತವನ್ನು ನಾಶಮಾಡುವುದೇ ಇಷ್ಟಲಿಂಗಪೂಜೆಯ ಮುಖ್ಯ ಉದ್ದೇಶ ಎಂಬುದನ್ನು ಸೂಚಿಸಿದರು."ಕಳ್ಳನಾಣ್ಯ ಸಲುಗೆಗೆ ಸಲ್ಲದು" ಎಂದು ಭ್ರಷ್ಟಾಚಾರದ ವಿರುದ್ಧ ಧ್ವನಿ ಎತ್ತಿದರು. "ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ ನಿಮ್ಮಾಣೆ" ಎಂದು ಸಂಗ್ರಹಬುದ್ಧಿಗೆ ಕಡಿವಾಣ ಹಾಕಿದರು. "ಲಿಂಗವ ಪೂಜಿಸಿ ಫಲವೇನಯ್ಯಾ ಸಮರತಿ, ಸಮಕಳೆ, ಸಮಸುಖವನರಿಯದನಕ್ಕ?" ಎಂಬ ಒಂದೇವಾಕ್ಯದಲ್ಲಿ, ಲಿಂಗಸಮಾನತೆ (ಸಮರತಿ), ವರ್ಣಸಮಾನತೆ (ಸಮಕಳೆ) ಮತ್ತು ಸಮಸುಖ (ವರ್ಗಸಮಾನತೆ) ಎಂಬ ಅರಿವೇ ಇಷ್ಟಲಿಂಗ ಪೂಜಾಫಲ ಎಂಬ ಸತ್ಯದ ದರ್ಶನ ಮಾಡಿಸಿದರು. "ಕಾಯಕವಾವುದೆಂದು ಬೆಸಗೊಂಡಡೆ ನಿಮ್ಮಾಣೆ" ಎಂದು ಎಲ್ಲ ಕಾಯಕಜೀವಿಗಳು ಸಮಾನರು ಎಂಬುದನ್ನು ಸೂಚಿಸಿದರು. "ಒಮ್ಮೆ ಶರಣೆಂದಡೆ ಪಾಪ ಕರ್ಮ ಓಡುವವು" ಎಂದು ಕರ್ಮಸಿದ್ಧಾಂತದಿಂದ ತುಳಿತಕ್ಕೊಳಗಾದ ಜನರಲ್ಲಿ ಆತ್ಮವಿಶ್ವಾಸ ಮೂಡಿಸಿದರು. "ಅಹಂಕಾರವೆಂಬಸದಮದಗಜವೇರಿ ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ" ಎಂದು ಶೋಷಕ ವರ್ಗದ ಕೃತ್ರಿಮ ಬದುಕಿನ ಬಗ್ಗೆ ವಿಷಾದ ವ್ಯಕ್ತಪಡಿಸಿದರು. "ಏನಯ್ಯಾ ವಿಪ್ರರು ನುಡಿದಂತೆ ನಡೆಯರು, ಇದೆಂತಯ್ಯಾ ತಮಗೊಂದು ಬಟ್ಟೆ (ದಾರಿ), ಶಾಸ್ತ್ರಕ್ಕೊಂದು ಬಟ್ಟೆ!" ಎಂದು

ಪುರೋಹಿತಶಾಹಿಗಳ ಜೀವನವಿಧಾನಕ್ಕೆ ಅಸಹ್ಯಪಟ್ಟರು. "ಎರೆದಡೆ ನನೆಯದು, ಮರೆದಡೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ" ಎಂದು ಸಾಮಾಜಿಕಪ್ರಜ್ಞೆ ಇಲ್ಲದೆ ಇಷ್ಟಲಿಂಗಪೂಜೆ ಮಾಡುವುದು ನಿಷ್ಪ್ರಯೋಜಕ ಎಂದು ಸಾರಿದರು. "ಇನ್ನು ಜಂಗಮವೇ ಲಿಂಗ ಎಂದು ನಂಬಿದೆ" ಎಂದು ತಿಳಿಸುತ್ತ ಸಮಾಜ (ಜಂಗಮ)ವೇ ದೇವರು ಎಂಬ ಪರಿಕಲ್ಪನೆಯನ್ನು ಮೂಡಿಸಿದರು. "ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ, ನಿಮ್ಮಿಂದಧಿಕ ಕೂಡಲಸಂಗಮದೇವಾ" ಎಂದು ತಿಳಿಸುತ್ತ ಮನುವಾದಿ ಸಮಾಜದಲ್ಲಿನ ಕಟ್ಟಕಡೆಯ ಮನುಷ್ಯರು ಕೂಡ ತಮ್ಮ ಸಚ್ಚಾರಿತ್ರ್ಯದ ಮೂಲಕ ವ್ಯಕ್ತಿತ್ವ ವಿಕಸನ ಹೊಂದುತ್ತ ದೇವರಿಗಿಂತ ದೊಡ್ಡವರಾಗಬಲ್ಲರು ಎಂಬ ಆಶಾಭಾವವನ್ನು ಮೂಡಿಸಿದರು. "ನ್ಯಾಯನಿಷ್ಠುರಿ ದಾಕ್ಷಿಣ್ಯಪರ ನಾನಲ್ಲ. ಲೋಕ ವಿರೋಧಿ ಶರಣನಾರಿಗಂಜುವವನಲ್ಲ" ಎಂದು ಅನ್ಯಾಯವನ್ನು ವಿರೋಧಿಸಿದರು. "ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ" ಎಂದು ಮಾನವಕುಲದ ಏಕತೆಯ ಬಗ್ಗೆ ಅರಿವುಮೂಡಿಸಿದರು. "ಕೈಲಾಸವೆಂಬುದೇನೊ, ಪೃಥ್ವಿಯ ಮೇಲೊಂದು ಮೊರಡಿ" ಎಂದು ಸ್ವರ್ಗದ ಮಹತ್ವವನ್ನು ಅಲ್ಲಗಳೆದರು. "ಆಚಾರವೇ ಸ್ವರ್ಗ, ಅನಾಚಾರವೇ ನರಕ" ಎಂದರು. "ಪುಣ್ಯಪಾಪವೆಂಬ ಉಭವ ಕರ್ಮವನಾರು ಬಲ್ಲರು?" ಎಂದು ಪ್ರಶ್ನಿಸುವ ಮೂಲಕ ಪುಣ್ಯಪಾಪವನ್ನು ಅಲ್ಲಗಳೆದರು. "ಕೂಡಲಸಂಗನ ಶರಣರು ಅಚ್ಚಲಿಂಗೈಕ್ಯರು" ಎಂದು ಹೇಳಿ ಮೋಕ್ಷವನ್ನು ಅಲ್ಲಗಳೆದರು. ಸಕಲ ಜೀವತ್ಮಾರಿಗೆ ಲೇಸಬಯಸುವ ಜೀವಕಾರುಣ್ಯವೊಂದೇ ಧರ್ಮದ ತಳಹದಿ ಎಂಬುದನ್ನು ಲೋಕದ ಜನರಿಗೆ ತಿಳಿಸಿಕೊಟ್ಟರು. "ಗಣತಿಂಥಿಣಿಯೊಳಗಿರಿಸೆನ್ನಲಿಂಗವೆ" ಎಂದು ಜನಸಾಗರದ ಮಧ್ಯೆ ತಮ್ಮ ಅಸ್ತಿತ್ವವನ್ನು ಕಂಡುಕೊಂಡರು. ಮಾನವರೆಲ್ಲ ಒಂದೇ ಎಂದು ಪ್ರತಿಪಾದಿಸುವ ಮೂಲಕ ಮಾನವಹಕ್ಕುಗಳನ್ನು ಎತ್ತಿಹಿಡಿದರು."ಭಕ್ತಿ ಇಲ್ಲದ ಬಡವನಾನಯ್ಯ; ಕಕ್ಕಯ್ಯನ ಮನೆಯಲ್ಲೂ ಬೇಡಿದೆ, ಚೆನ್ನಯ್ಯನ ಮನೆಯಲ್ಲೂ ಬೇಡಿದೆ" ಎಂದುಹೇಳುತ್ತ ಕೆಳಜಾತಿ ಮತ್ತು ಕೆಳವರ್ಗದ ಜನರ ಅನುಭವಗಳನ್ನು ಎತ್ತಿಹಿಡಿದು ಅವುಗಳಿಂದ ಪಾಠ ಕಲಿತಿರುವುದಾಗಿ ಸೂಚಿಸಿದರು. "ದೇವನೊಬ್ಬ ನಾಮಹಲವು" ಎನ್ನುವ ಮೂಲಕ ವಿವಿಧ ದೇವರುಗಳ ಆರಾಧಕರ ಮೂಲ ದೇವರು ಒಬ್ಬನೆ ಮತ್ತು ಆರಾಧಕರೆಲ್ಲರೂ ಒಂದೇ ಮಾನವ ಜನಾಂಗ ಹಾಗೂ ಒಂದೇ ಜಗತ್ತಿಗೆ ಸೇರಿದವರು ಎಂಬುದನ್ನು ಮನದಟ್ಟುಮಾಡಿಕೊಟ್ಟರು. "ಸರ್ವಸೂತಕಗಳು ಲಿಂಗಭಕ್ತರಿಗಿಲ್ಲನೋಡಾ", "ಹೋಮನೇಮ ಜಪ ತಪದಿಂದ ವೆಗ್ಗಳ ಕೂಡಲಸಂಗಮ ದೇವಾ ನಿಮ್ಮ ಮಾಣದೆ ನೆನೆವಂಗೆ" ಎಂದು ಮುಂತಾಗಿ ಘೋಷಿಸುವ ಮೂಲಕ ಎಲ್ಲ ತೆರನಾದ ಮೂಢನಂಬಿಕೆಗಳನ್ನು ಬಸವಣ್ಣನವರು ಅಲ್ಲಗಳೆದರು. "ಲಿಂಗವ್ಯಸನಿ

ಜಂಗಮಪ್ರೇಮಿ ಎಂದೆನಿಸಯ್ಯಾ" ಎಂದು ಬೇಡುವ ಮೂಲಕ ಆದರ್ಶಗಳಿಗೆ ಅಂಟುಕೊಂಡು ಸಮಾಜಪ್ರೇಮಿಗಳಾಗಿರಬೇಕು ಎಂಬ ಭಾವ ವ್ಯಕ್ತಪಡಿಸಿದರು. ಹೀಗೆ ಬಸವಣ್ಣನವರಿಗೆ ಸಮಾಜವೇ ದೇವರಾಗಿದೆ. ಜನಸೇವೆಯೇ ಪೂಜೆ, ಪ್ರಾರ್ಥನೆಗಳಾಗಿವೆ. ಬಸವಧರ್ಮವು ನಿಜವಾದ ಅರ್ಥದಲ್ಲಿ ಸಮಾಜಸೇವಾ ಧರ್ಮವಾಗಿದೆ. ಸರ್ವ ಸಮತ್ವವನ್ನು ಸಾಧಿಸುವ ಮಹಾಸಾಧನವಾಗಿದೆ.

ಬಸವಣ್ಣನವರ ಜೊತೆಗಿದ್ದ ಶರಣರೆಲ್ಲರೂ ಇದೇ ಕ್ರಮದಲ್ಲಿ ಚಿಂತನೆ ಮಾಡಿದ್ದಾರೆ. ವೈವಿಧ್ಯದಲ್ಲಿ ಏಕತೆಯನ್ನು ಸಾಧಿಸಿದ್ದಾರೆ. "ಪೃಥ್ವಿಯಿಂದ ಸಕಲ ಜೀವರೆಲ್ಲರೂ ಉದ್ಭವ ಗುಹೇಶ್ವರಾ" ಎಂದು ಅಲ್ಲಮಪ್ರಭುಗಳು ಹೇಳುವಲ್ಲಿ ಸಕಲಜೀವರಾಶಿಗಳ ಮಧ್ಯದ ಘನಸಂಬಂಧವನ್ನು ಸೂಚಿಸುತ್ತಾರೆ. ಸರ್ವಸಮತ್ವದ ಚಿಂತನೆಗೆ ಮೂಲ ಆಕರ ಒದಗಿಸುತ್ತಾರೆ. "ಒಂದೇ ವಸ್ತು ತನ್ನ ಲೀಲೆಯಿಂದ ಪರಮಾತ್ಮ ಜೀವಾತ್ಮ ಎಂದಾಯಿತು" ಎಂದು ಉರಿಲಿಂಗಪೆದ್ದಿಗಳು ಜೀವ ಮತ್ತು ದೇವರಮಧ್ಯದ ಅವಿರತ ಸಂಬಂಧವನ್ನು ಗುರುತಿಸುತ್ತಾರೆ. "ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ" ಎಂದು ಹೇಳುವ ಮೂಲಕ ನುಲಿಯ ಚಂದಯ್ಯನವರು ಎಲ್ಲರೂ ಉತ್ಪಾದನೆಯಲ್ಲಿ ತೊಡಗಿದಾಗ ಮಾತ್ರ ಸರ್ವಸಮತ್ವದ ಸಮಾಜ ನಿರ್ಮಾಣ ಮಾಡಲು ಸಾಧ್ಯ ಎಂದು ಸೂಚಿಸುತ್ತಾರೆ. "ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕ ದೊಳಗು" ಎಂದು ಆಯ್ದಕ್ಕಿಮಾರಯ್ಯನವರು ಇನ್ನೂ ಮುಂದುವರಿದು ಮೇಲಿನ ಮಾತಿಗೆ ಪುಷ್ಟಿ ಕೊಡುತ್ತಾರೆ. "ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ" ಎಂದು ಕಾಳವ್ವೆ ಹೇಳುತ್ತ ಉತ್ಪಾದನಾ ವ್ಯವಸ್ಥೆ ಮತ್ತು ಮಾನವಸಂಪನ್ಮೂಲದ ಮಹತ್ವವನ್ನು ಸಾರುತ್ತಾಳೆ. "ಹದಮಣ್ಣಲ್ಲದೆ ಮಡಕೆಯಾಗದು" ಎಂದು ಕುಂಬಾರಗುಂಡಯ್ಯನವರ ಪುಣ್ಯಸ್ತ್ರೀ ಕೇತಲದೇವಿ ಗುಣಮಟ್ಟದ ಉತ್ಪನ್ನವಿರಬೇಕು ಮತ್ತು ಬದುಕು ಕೂಡ ಹಾಗೇ ಇರಬೇಕು ಎಂದು ಸೂಚಿಸುತ್ತಾಳೆ. "ಲಂಚವಂಚನಕ್ಕೆ ಕೈಯಾನದ ಭಾಷೆ" ಎಂದು ಕಸಗುಡಿಸುವ ಸತ್ಯಕ್ಕ, ಸಮಾಜವು ಕಾಯಕದಿಂದ ಬದುಕಬೇಕೆ ಹೊರತು ಭ್ರಷ್ಟಾಚಾರದಿಂದ ಅಲ್ಲ ಎಂಬ ಸಂದೇಶವನ್ನು ನೀಡುತ್ತಾಳೆ. "ಆನೆ ಕುದುರೆ ಭಂಡಾರವಿರ್ದಡೇನೊ ತಾನುಂಬುದು ಪಡಿಯಕ್ಕಿ" ಎಂದು ಮೋಳಿಗೆ ಮಾರಯ್ಯನವರು ಸಂಗ್ರಹಬುದ್ಧಿಗೆ ಕಡಿವಾಣ ಹಾಕುತ್ತಾರೆ.

ಹೀಗೆ ಎಲ್ಲ ಶರಣರು ಬಸವಣ್ಣನವರ ಕಾಯಕತತ್ತ್ವವನ್ನು ಎತ್ತಿಹಿಡಿದಿದ್ದಾರೆ. ಬಸವತತ್ತ್ವ, ಕಾಯಕತತ್ತ್ವ ಮತ್ತು ಇಷ್ಟಲಿಂಗತತ್ತ್ವ ಬೇರೆ ಅಲ್ಲ ಎಂದು ತೋರಿಸಿ ಕೊಟ್ಟಿದ್ದಾರೆ. ಸಮಾನತೆಯಿಂದ ಕೂಡಿದ ಸಮಾಜದ ಬೇರುಗಳು 'ಯೋಗ್ಯರೀತಿಯಲ್ಲಿ

ಉತ್ಪಾದನೆ, ಯೋಗ್ಯರೀತಿಯಲ್ಲಿ ಬಳಕೆ ಮತ್ತು ಯೋಗ್ಯರೀತಿಯಲ್ಲಿ ಸಾಮಾಜಿಕ ವಿತರಣೆ' ಎಂಬ ಸೂತ್ರದ ಮೇಲೆ ನಿಂತಿವೆ ಎಂಬುದನ್ನು ಶರಣರೆಲ್ಲ ಸೂಚಿಸಿದ್ದಾರೆ. ಇದನ್ನೇ ಬಸವಧರ್ಮದ ಪರಿಭಾಷೆಯಲ್ಲಿ 'ಕಾಯಕ – ಪ್ರಸಾದ – ದಾಸೋಹ' ಎಂದು ಹೇಳಲಾಗಿದೆ.

"ಕರುಣಿ ಬಸವಾ, ಕಾಲಹರ ಬಸವಾ, ಕರ್ಮಹರ ಬಸವಾ, ನಿರ್ಮಳ ಬಸವಾ, ಶಿವಜ್ಞಾನಿ ಬಸವಾ, ನಿಮ್ಮ ಧರ್ಮವಯ್ಯಾ ಈ ಭಕ್ತಿಯ ಪದವು ಕರುಣಿ ಕಪಿಲಸಿದ್ಧ ಮಲ್ಲಿನಾಥಯ್ಯಾ ನಿಮಗೂ ಎನಗೂ ಬಸವಣ್ಣನ ಧರ್ಮವಯ್ಯಾ" ಎಂದು ಸಿದ್ಧರಾಮರು ಹೇಳುವಲ್ಲಿ ಬಸವಣ್ಣನವರೇ ಸಮಾನತೆ ಸಾರುವ ಲಿಂಗವಂತ ಧರ್ಮಸ್ಥಾಪಕರು ಎಂಬುದನ್ನು ಸೂಚಿಸಿದ್ದಾರೆ.

●

# ಮಾನವ ಹಕ್ಕುಗಳು ಮತ್ತು ಬಸವ ತತ್ತ್ವ

ಎರಡನೇ ಮಹಾಯುದ್ಧದಲ್ಲಿ ಐದು ಕೋಟಿ ಜನರ ಮಾರಣಹೋಮ ನಡೆಯಿತು. ಇದೇ ಸಂದರ್ಭದಲ್ಲಿ ಯುದ್ಧಗಳನ್ನು ಶಮನ ಮಾಡುವ ಮುಖ್ಯ ಉದ್ದೇಶದಿಂದ ಅಸ್ತಿತ್ವಕ್ಕೆ ಬಂದ ವಿಶ್ವಸಂಸ್ಥೆ ಅಂತರ್ರಾಷ್ಟ್ರೀಯ ಶಾಂತಿ ಮತ್ತು ಭದ್ರತೆ ಮೂಡಿಸುವಂಥ "ವಿಶ್ವಸಂಸ್ಥೆ ಘೋಷಣೆ"ಯನ್ನು ೧೯೪೨ನೇ ಜನವರಿ ೧ರಂದು ಅಂಗೀಕರಿಸಿತು. ಅದಕ್ಕೆ "ಚಾರ್ಟರ್ ಆಫ್ ದಿ ಯುನೈಟೆಡ್ ನೇಷನ್ಸ್" ಎಂದು ಕರೆಯುತ್ತಾರೆ.

೧೯೪೮ನೇ ಡಿಸೆಂಬರ್ ೧೦ರಂದು ವಿಶ್ವಸಂಸ್ಥೆಯು "ಮಾನವ ಹಕ್ಕುಗಳ ಜಾಗತಿಕ ಘೋಷಣೆ" (ಯೂನಿವರ್ಸಲ್ ಡಿಕ್ಲೆರೇಷನ್ ಆಫ್ ಹ್ಯೂಮನ್ ರೈಟ್ಸ್) ಯನ್ನು ಅಂಗೀಕರಿಸಿದ್ದು ಮಾನವ ಇತಿಹಾಸದ ಮಹತ್ವದ ಕ್ಷಣಗಳಲ್ಲಿ ಒಂದಾಗಿದೆ. ಮಾನವಕುಲದ ಹಕ್ಕು ಮತ್ತು ಸ್ವಾತಂತ್ರ್ಯಕ್ಕಾಗಿ ನಡೆಸಿದ ಮೊದಲ ಅಂತರ್ರಾಷ್ಟ್ರೀಯ ಪ್ರಯತ್ನ ಇದಾಗಿದೆ. ಎಲ್ಲ ದೇಶಗಳ ಜನಸಮುದಾಯಗಳನ್ನು ಮಾನವ ಘನತೆಯೊಂದಿಗೆ ಬೆಸೆಯುವ ಘೋಷಣೆ ಇದು.

೨೦ನೇ ಶತಮಾನದಲ್ಲಿ ಎರಡು ಮಹಾಯುದ್ಧಗಳ ಹಿನ್ನೆಲೆಯಲ್ಲಿ ವಿಶ್ವಸಂಸ್ಥೆ ಅಸ್ತಿತ್ವಕ್ಕೆ ಬಂದರೆ, ೧೨ನೇ ಶತಮಾನದಲ್ಲಿ ಬಸವ ತತ್ತ್ವವು ಮಾನವ ಹಕ್ಕುಗಳನ್ನು ಎತ್ತಿಹಿಡಿದ ನಂತರ ಕಲ್ಯಾಣದಲ್ಲಿ ಶರಣರ ಹತ್ಯಾಕಾಂಡವಾಯಿತು!

ಮಹಿಳೆಯರು, ದಲಿತರು ಮತ್ತು ಕಾಯಕಜೀವಿಗಳ ಹಕ್ಕುಗಳನ್ನು ಬಸವಣ್ಣನವರ ಮಾನವ ಹಕ್ಕುಗಳು ಒಳಗೊಂಡಿವೆ. ಮಹಿಳೆಯರ, ಕಾರ್ಮಿಕರ ಮತ್ತು ಕರಿಯರ ಹಕ್ಕುಗಳ ಬಗ್ಗೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಯಾರಿಗೂ ಕನಸುಗಳು ಕೂಡ ಬೀಳದ

೧೨ನೇ ಶತಮಾನದಲ್ಲಿ ಜಗಜ್ಜ್ಯೋತಿ ಬಸವೇಶ್ವರರು ಈ ಎಲ್ಲರ ಹಕ್ಕುಗಳ ಬಗ್ಗೆ ಮಾತನಾಡಿದ್ದು ವಿಶ್ವದ ಇತಿಹಾಸದ ಪುಟಗಳಲ್ಲಿ ಸೇರಬೇಕಿದೆ. ಮಾನವ ಹಕ್ಕುಗಳನ್ನು ಅಹಿಂಸಾ ಹೋರಾಟದ ಮೂಲಕ ಸಾಧಿಸಬೇಕಾಗುವ ಕಲೆಯನ್ನು ಬಸವಣ್ಣನವರು ಕಲಿಸಿಕೊಟ್ಟಿದ್ದಾರೆ. ಬಸವ ತತ್ತ್ವಗಳನ್ನು ವಿಶ್ವಕ್ಕೆ ತಿಳಿಸುತ್ತ ಎಲ್ಲ ರೀತಿಯ ಕ್ರೌರ್ಯಗಳಿಂದ ಮಾನವ ಜನಾಂಗವನ್ನು ರಕ್ಷಿಸುವುದು ಇಂದಿನ ತುರ್ತು ಅಗತ್ಯವಾಗಿದೆ.

ರೂಸೋನ ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರತ್ವದ ಘೋಷಣೆಯು ೧೭೮೭–೧೭೮೯ರ ಫ್ರೆಂಚ್ ಕ್ರಾಂತಿಗೆ ಕಾರಣವಾಯಿತು. ಆದರೆ ಅದೇ ರೂಸೋ ೧೭೬೨ರಲ್ಲಿ "ಮೌಢ್ಯವು ಮಹಿಳೆಯರಿಗೆ ಸಂಪೂರ್ಣ ಲಾಭದಾಯಕವಾಗಿದೆ" ಎಂದು ಪ್ರತಿಪಾದಿಸಿದ್ದ. "ಅವರು ರಾಜಕೀಯದಲ್ಲಿ ಇರಬಾರದು" ಎಂದು ಕೂಡ ಹೇಳಿದ್ದ! ಹೀಗೆ ಜಗತ್ತಿನ ಎಲ್ಲೆಡೆ ಪುರುಷ ಪ್ರಧಾನವಾದ ಸಮಾಜಗಳಲ್ಲಿ ಮಹಿಳೆಯರು ಪುರುಷರ ಅಡಿಯಾಳುಗಳಾಗುತ್ತಲೇ ಬಂದಿದ್ದಾರೆ.

ಫ್ರೆಂಚ್ ಕ್ರಾಂತಿಯ ನಂತರ ೧೭೮೯ರಲ್ಲಿ ನಾಗರಿಕ ಹಕ್ಕುಗಳ ಘೋಷಣೆಯನ್ನು ಅಂಗೀಕರಿಸಿದಾಗ ಮಹಿಳೆಯರ ಕುರಿತ ರೂಸೋನ ವಿಚಾರಗಳನ್ನು ಆ ಘೋಷಣೆಯಲ್ಲಿ ಸೇರ್ಪಡೆ ಮಾಡಲಾಯಿತು! ಮಹಿಳೆಯರ ಮತ್ತು ಗುಲಾಮರ ಹಕ್ಕುಗಳ ಬಗ್ಗೆ ಮಾತನಾಡದ ಈ ಘೋಷಣೆ ಅಪೂರ್ಣವಾಯಿತು. ಇತಿಹಾಸದ ಬಹುಮುಖ್ಯ ಕ್ರಾಂತಿಗಳಲ್ಲಿ ಒಂದಾದ ಫ್ರೆಂಚ್ ಕ್ರಾಂತಿ ಮೇಲ್ವರ್ಗದ ಪುರುಷ ಪ್ರಧಾನ ಕ್ರಾಂತಿಯಾಗಿ ಮಾರ್ಪಟ್ಟಿತು.

ನಂತರ ಅಮೆರಿಕದ ಸ್ವಾತಂತ್ರ್ಯ ಘೋಷಣೆ ಕೂಡ ಮೇಲ್ವರ್ಗದ ಪುರುಷ ಪ್ರಧಾನವಾದ ಘೋಷಣೆಯಾಯಿತು. ಈ ಘೋಷಣೆಯಲ್ಲಿ ಎತ್ತಿಹಿಡಿದ ಸ್ವಾತಂತ್ರ್ಯ ಮತ್ತು ಸಮಾನತೆ ಶ್ರೀಮಂತ ಪುರುಷರಿಗಾಗಿ ಮಾತ್ರ ಇದ್ದವು. ಮಹಿಳೆಯರು, ಗುಲಾಮರು ಮತ್ತು ಆಸ್ತಿ ಇಲ್ಲದವರು ಈ ಹಕ್ಕುಗಳಿಂದ ವಂಚಿತರಾಗಿದ್ದರು.

ತದನಂತರ ಬಂದ "ಮಾನವ ಹಕ್ಕುಗಳ ಜಾಗತಿಕ ಘೋಷಣೆ" ಸಂದರ್ಭದಲ್ಲಿ ಕೂಡ ಮಹಿಳೆಯರನ್ನು ಮರೆಯಲಾಗಿತ್ತು. ಆಗ ಮಹಿಳಾ ಪ್ರತಿನಿಧಿಗಳು ಪ್ರತಿಭಟನೆ ಮಾಡಿದರು. ಆ ಕಾರಣದಿಂದಲೇ "ಮಾನವ ಹಕ್ಕುಗಳ ಜಾಗತಿಕ ಘೋಷಣೆ" ಲಿಂಗತಾರತಮ್ಯವಿಲ್ಲದ ಮೊದಲ ಘೋಷಣೆಯಾಯಿತು. ಹೀಗೆ ಆಧುನಿಕ ಸಮಾಜ ಮಹಿಳೆಯರ ಹಕ್ಕುಗಳನ್ನು ಅಂಗೀಕರಿಸಲು ಒದ್ದಾಡುತ್ತಿದೆ. ಆದರೆ ಬಸವಣ್ಣನವರು "ಶರಣ ಸತಿ ಲಿಂಗ ಪತಿ" ಘೋಷಣೆ ಮೂಲಕ ಲಿಂಗತಾರತಮ್ಯವನ್ನು ಆಧ್ಯಾತ್ಮಿಕ ವಾಗಿಯೂ ನಿವಾರಿಸಿದರು. ಕಾಯಕದ ಘೋಷಣೆಯೊಂದಿಗೆ ಯಾವುದೇ ಕಾಯಕ

ಕೀಳಲ್ಲ ಎಂಬ ಅರಿವು ಮೂಡಿಸಿದರು. ಮಾನವನು ಅಹಂಕಾರದಿಂದ ಮುಕ್ತನಾದಾಗ ಮಾತ್ರ ಸಮಾಜವು ಎಲ್ಲ ರೀತಿಯ ಕೊರತೆ ಮತ್ತು ಹಿಂಸೆಯಿಂದ ಮುಕ್ತವಾಗುವು ದೆಂಬುದನ್ನು ದಾಸೋಹದ ಘೋಷಣೆಯೊಂದಿಗೆ ತೋರಿಸಿಕೊಟ್ಟರು. ಹೆಣ್ಣಿರಲಿ–ಗಂಡಿರಲಿ, ಬಡವನಿರಲಿ–ಶ್ರೀಮಂತನಿರಲಿ, ಸವರ್ಣೀಯನಿರಲಿ–ಅಸ್ಪೃಶ್ಯನಿರಲಿ ಜಗತ್ತಿನ ಜನರೆಲ್ಲ ದೇವರ ಚೈತನ್ಯದಿಂದ ಕೂಡಿದವರು ಎಂಬುದನ್ನು ಜಂಗಮಲಿಂಗದ ಘೋಷಣೆಯ ಮೂಲಕ ಎತ್ತಿಹಿಡಿದರು. ಯಾವುದೇ ರೀತಿಯ ಅಸಮಾನತೆ ಕೃತ್ರಿಮ ವಾದುದೆಂದು ಸಾರಿದರು. ಹೀಗಾಗಿ ಬಸವಣ್ಣನವರ ಶರಣ ಸಂಕುಲದಲ್ಲಿ ಅಸ್ಪೃಶ್ಯರು, ಮಹಿಳೆಯರು, ಬಡವರು ಮತ್ತು ಎಲ್ಲ ಕಾಯಕಜೀವಿಗಳು ಸರ್ವಸಮಾನತೆಯನ್ನು ಅನುಭವಿಸಿದರು. ಬ್ರಾಹ್ಮಣ ಮಧುವರಸರು ಶರಣರಾಗುವ ಮೂಲಕ ಮೇಲ್ಜಾತಿಯ ಅಹಂಕಾರದಿಂದ ಮುಕ್ತರಾಗಿದ್ದರು. ಸಮಗಾರ ಹರಳಯ್ಯನವರು ಶರಣರಾಗುವ ಮೂಲಕ ಕೆಳಜಾತಿಯ ಕೀಳರಿಮೆಯಿಂದ ಮುಕ್ತರಾಗಿದ್ದರು. ಹೀಗೆ ವಿವಿಧ ಜಾತಿಗಳ ಸಂಕರವಾದಂಥ ಶರಣಸಂಕುಲ ಎಲ್ಲ ರೀತಿಯ ಅಸಮಾನತೆಯನ್ನು ಮೆಟ್ಟಿ ನಿಂತು ಮಾನವ ಹಕ್ಕುಗಳ ಧ್ವಜವನ್ನು ಹಾರಿಸಿದ ಸಮಾಜವಾಗಿತ್ತು. ಇಲ್ಲಿ ಎಲ್ಲರೂ ತಮ್ಮ ಮತ್ತು ಇತರರ ಜಾತಿಗಳನ್ನು ಮನಸ್ಸಿನಿಂದ ಅಳಿಸಿಹಾಕಿ ಕಾಯಕ ಉಳಿಸಿಕೊಂಡಿದ್ದರು. ಗಂಡ ಮತ್ತು ಹೆಂಡಂದಿರಲ್ಲಿ ಮೇಲುಕೀಳಿನ ಅನುಚರ ಭಾವ ಹೋಗಿ ಸಮಾನತೆಯ ಸಹಚರ ಭಾವ ಮೂಡಿತ್ತು. ಹೀಗೆ ವರ್ಗ, ವರ್ಣ, ಜಾತಿ, ಕುಲ, ಕಾಯಕ ಮತ್ತು ಲಿಂಗಭೇದಗಳಿಲ್ಲದೆ ಎಲ್ಲರನ್ನು ಒಂದಾಗಿಸಿ ಸಮಾನತೆ ಸಾಧಿಸಿದ್ದು ಮಾನವ ಇತಿಹಾಸದ ಬಹುಮುಖ್ಯ ಘಟನೆಗಳಲ್ಲಿ ಒಂದಾಗಿದೆ.

ಮಾನವ ಹಕ್ಕುಗಳ ಜಾಗತಿಕ ಘೋಷಣೆಯ ಎಲ್ಲ ೩೦ ಅಂಶಗಳನ್ನು ಕೆಳಗೆ ಕೊಡಲಾಗಿದ್ದು ಆವರಣದಲ್ಲಿ ಬಸವತತ್ತ್ವದ ವಿಚಾರಗಳನ್ನು ತಿಳಿಸಲಾಗಿದೆ.

೧. ಎಲ್ಲ ಮಾನವರು ಹುಟ್ಟಿನಿಂದಲೇ ಸ್ವತಂತ್ರರು ಮತ್ತು ಘನತೆ ಹಾಗೂ ಹಕ್ಕುಗಳಲ್ಲಿ ಸಮಾನರು.
   ("ಕೂಡಲಸಂಗನ ಶರಣರು ಸ್ವತಂತ್ರಧೀರರು" ಎಂದು ಬಸವಣ್ಣನವರು ತಿಳಿಸಿದ್ದಾರೆ. "ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ ನಿಮ್ಮಿಂದಧಿಕ ನೋಡಾ ಕೂಡಲಸಂಗಮದೇವಾ" ಎಂದು ಹೇಳುವ ಮೂಲಕ ಮಾನವ ಘನತೆಯನ್ನು ಎತ್ತಿ ಹಿಡಿದಿದ್ದಾರೆ.)

೨. ಮಾನವ ಹಕ್ಕುಗಳ ಘೋಷಣೆಯಲ್ಲಿನ ಎಲ್ಲ ಹಕ್ಕುಗಳು ಮತ್ತು ಸ್ವಾತಂತ್ರ್ಯ ಎಲ್ಲರಿಗೂ ಸಮಾನವಾಗಿವೆ.

('ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ' ಎಂದು ಬಸವಣ್ಣನವರು ಹೇಳಿದ್ದಾರೆ. "ಕುದುರೆ ಸತ್ತಿಗೆಯವರು ಕಂಡಡೆ ಹೊರಳಿ ಬಿದ್ದು ಕಾಲ ಹಿಡಿವರು; ಬಡಭಕ್ತರು ಬಂದಡೆ ಎಡೆಯಿಲ್ಲ ಅತ್ತ ಸನ್ನಿ ಎಂಬರು" ಎಂದು ಸಾತ್ವಿಕ ಕೋಪ ತೋರಿದ್ದಾರೆ.)

೩. ಪ್ರತಿಯೊಬ್ಬನಿಗೂ ಬದುಕುವ, ಸ್ವತಂತ್ರವಾಗಿರುವ ಮತ್ತು ಭದ್ರತೆಯ ಹಕ್ಕಿದೆ. ("ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದಡೆ ಕಾಗೆ ಕೋಳಿಯಿಂದ ಕರಕಷ್ಟ." ಎಂದು ಬಸವಣ್ಣನವರು ತಿಳಿಸಿದ್ದಾರೆ. ಬಸವಣ್ಣನವರ ಭಕ್ತಿಪಕ್ಷವು ಪ್ರತಿಯೊಬ್ಬರಿಗೂ ಬದುಕುವ, ಸ್ವತಂತ್ರವಾಗಿರುವ ಮತ್ತು ಭದ್ರತೆಯ ಹಕ್ಕನ್ನು ಕೊಡುವುದು.)

೪. ಗುಲಾಮಗಿರಿಗೆ ಅವಕಾಶವಿಲ್ಲ.
("ದಾಸೀ ಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ, ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೇ ಯೋಗ್ಯ" ಎಂದು ಬಸವಣ್ಣನವರು ಎಲ್ಲರ ಘನತೆ ಒಂದೇ ಎಂಬುದನ್ನು ತೋರಿಸಿ ಕೊಟ್ಟಿದ್ದಾರೆ.)

೫. ಯಾರ ವಿರುದ್ಧವೂ ಕ್ರೂರವಾಗಿ ನಡೆದುಕೊಳ್ಳುವಂತಿಲ್ಲ, ಅಮಾನುಷ ಶಿಕ್ಷೆ ವಿಧಿಸುವಂತಿಲ್ಲ.
("ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗನ ಶರಣರೆ ಕುಲಜರು." ಎಂದು ಬಸವಣ್ಣನವರು ಹೇಳುವುದರ ಮೂಲಕ ಕ್ರೌರ್ಯ ಮತ್ತು ಅಮಾನುಷ ನಡೆವಳಿಕೆಯನ್ನು ವಿರೋಧಿಸಿದ್ದಾರೆ.)

೬. ಕಾನೂನಿನ ಮುಂದೆ ಪ್ರತಿಯೊಬ್ಬನೂ ವ್ಯಕ್ತಿಯಾಗಿ ಗುರುತಿಸಿಕೊಳ್ಳುವ ಹಕ್ಕನ್ನು ಪಡೆದಿರುತ್ತಾನೆ.
(ಶರಣರು ಈ ಹಕ್ಕಿನ ಪರವಾಗಿದ್ದರು. ಆದರೆ ಹರಳಯ್ಯ ಮತ್ತು ಮಧುವರಸರ ಮಕ್ಕಳ ಮದುವೆಗೆ ಸಂಬಂಧಿಸಿದಂತೆ ರಾಜ್ಯಶಕ್ತಿ ಅವರಿಗೆ ತಮ್ಮ ವಿಚಾರ ವ್ಯಕ್ತಪಡಿಸಲು ಅವಕಾಶ ಕೊಡದೆ ಚಿತ್ರಹಿಂಸೆ ನೀಡಲಾಯಿತು.)

೭. ಕಾನೂನಿನ ಮುಂದೆ ಎಲ್ಲರೂ ಒಂದೆ.
("ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರನು ನಾನಲ್ಲ" ಎಂದು ಹೇಳುವುದರ ಮೂಲಕ ಬಸವಣ್ಣನವರು ಕಾನೂನಿನ ಮುಂದೆ ಎಲ್ಲರೂ ಒಂದೆ ಎಂಬುದನ್ನು ಸಾರಿದ್ದಾರೆ.)

೮. ತನ್ನ ಮೂಲಭೂತ ಹಕ್ಕುಗಳ ಪ್ರಕಾರ ನ್ಯಾಯ ಕೇಳುವ ಹಕ್ಕು ಪ್ರತಿಯೊಬ್ಬನಿಗೆ ಇದೆ.
(“ಆನೀ ಬಿಜ್ಜಳಂಗಂಜುವೆನೆ ಅಯಾ? ಕೂಡಲಸಂಗಮದೇವಾ” ಎಂದು ಬಸವಣ್ಣನವರು ಪ್ರಧಾನಿಯಾಗಿ ಅರಸ ಬಿಜ್ಜಳನ ಬಗ್ಗೆ ಹೇಳುತ್ತ ತಮ್ಮ ಹಕ್ಕಿನ ಪ್ರತಿಪಾದನೆ ಮಾಡಿದ್ದಾರೆ.)

೯. ಯಾರನ್ನೂ ಮನಸ್ಸಿಗೆ ಬಂದಂತೆ ಬಂಧಿಸಲಿಕ್ಕಾಗದು.
(ಶೀಲವಂತ ಮತ್ತು ಲಾವಣ್ಯವತಿಯರ ವಿವಾಹದ ಕಾರಣ ಬಿಜ್ಜಳನು ಅವರ ತಂದೆಯಂದಿರಾದ ಸಮಗಾರ ಹರಳಯ್ಯ ಮತ್ತು ಮಧುವರಸರನ್ನು ಬಂಧಿಸಿದನು. ಶರಣ ತತ್ತ್ವದ ಪ್ರಕಾರ ಅವರಲ್ಲಿ ಜಾತಿಭೇದವಿಲ್ಲ. ಆದರೆ ಬಿಜ್ಜಳ ಒಪ್ಪಿದ ವೈದಿಕ ತತ್ತ್ವದ ಪ್ರಕಾರ ಅದು ಅಂತರ್ಜಾತೀಯ ವಿವಾಹ ವಾಗಿತ್ತು. ಹೀಗೆ ಆತ ತನ್ನ ಮನಸ್ಸಿಗೆ ಬಂದಂತೆ ಅಮಾಯಕರನ್ನು ಬಂಧಿಸಿದ. ಶಿಕ್ಷೆಯನ್ನೂ ವಿಧಿಸಿದ.)

೧೦. ಸ್ವತಂತ್ರ ನ್ಯಾಯ ಮಂಡಲಿಗಳ ಮೂಲಕ ನ್ಯಾಯ ಪಡೆಯುವ ಹಕ್ಕು ಪ್ರತಿಯೊಬ್ಬರಿಗೆ ಇದೆ.
(ಬಿಜ್ಜಳನು ಶರಣರಿಗೆ ನ್ಯಾಯ ಪಡೆಯುವ ಹಕ್ಕನ್ನು ನಿರಾಕರಿಸಿ ಹಿಂಸೆಗೆ ಒಳಪಡಿಸಿದ ಕಾರಣ ಕಲ್ಯಾಣದಲ್ಲಿ ಹತ್ಯಾಕಾಂಡವಾಯಿತು.)

೧೧. ಆರೋಪಕ್ಕೊಳಗಾದವರು ಯಾರೇ ಇರಲಿ, ‘ಅಪರಾಧಿ’ ಎಂದು ತೀರ್ಪು ಬರುವವರೆಗೂ ಮುಗ್ಧರು ಎಂದು ಹೇಳುವ ಹಕ್ಕನ್ನು ಹೊಂದಿದ್ದಾರೆ.
(ಈ ಹಕ್ಕು ಶರಣರಿಗೆ ಸಿಗುವಂಥ ನ್ಯಾಯಪದ್ಧತಿ ಬಿಜ್ಜಳನ ರಾಜ್ಯದಲ್ಲಿ ಇರಲಿಲ್ಲ. ಏಕೆಂದರೆ ಆತ ಅನ್ಯಾಯ ಮತ್ತು ಅಸಮಾನತೆಯಲ್ಲಿ ನಂಬಿಕೆ ಇಟ್ಟವರ ಒತ್ತಡಕ್ಕೆ ಮಣಿದಿದ್ದ.)

೧೨. ಯಾರದೇ ಖಾಸಗಿ ಬದುಕಿನಲ್ಲಿ ಕೈ ಹಾಕುವಂತಿಲ್ಲ. ಯಾರ ಘನತೆಗೂ ಕುಂದು ತರುವಂತಿಲ್ಲ.
(“ಕೂಡಲಸಂಗಮದೇವಾ ಭಕ್ತರ ಕುಲವನರಸಿದಡೆ ನಿಮ್ಮ ರಾಣಿವಾಸದಾಣೆ!” ಎಂದು ಬಸವಣ್ಣನವರು ಹೇಳುತ್ತಾರೆ.)

೧೩. ಪ್ರತಿಯೊಬ್ಬರಿಗೂ ತಮ್ಮ ದೇಶದಲ್ಲಿ ಮುಕ್ತವಾಗಿ ಸಂಚರಿಸುವ ಹಕ್ಕಿದೆ.
(ಮನುಸ್ಮೃತಿಯ ಪ್ರಕಾರ ಅಸ್ಪೃಶ್ಯರು ಈ ಹಕ್ಕನ್ನು ಕಳೆದುಕೊಂಡಿದ್ದರು. ಬಸವಣ್ಣನವರು "ಜಾತಿಸಂಕರವಾದ ಬಳಿಕ ಕುಲವನರಸುವರೆ" ಎಂದು ಪ್ರಶ್ನಿಸಿ ಎಲ್ಲರಿಗೂ ಮುಕ್ತವಾಗಿ ಸಂಚರಿಸುವ ಹಕ್ಕು ಬರುವಂತೆ ಮಾಡಿದರು.)

೧೪. ತಮ್ಮ ದೇಶದಲ್ಲೇ ಮಾನವಹಕ್ಕುಗಳ ದಮನ ನಡೆದಾಗ ಬೇರೆ ದೇಶಗಳಲ್ಲಿ ಆಶ್ರಯ ಪಡೆಯುವ ಅವಕಾಶವಿದೆ.
(ಕಲ್ಯಾಣದಲ್ಲಿ ಶರಣರ ಹತ್ಯಾಕಾಂಡ ನಡೆದ ಸಂದರ್ಭದಲ್ಲಿ ಅನೇಕ ಶರಣರು ನೆರೆಯ ದೇಶಗಳಲ್ಲಿ ಆಶ್ರಯ ಪಡೆದರು.)

೧೫. ಪ್ರತಿಯೊಬ್ಬರಿಗೂ ರಾಷ್ಟ್ರೀಯತೆಯ ಹಕ್ಕಿದೆ.
(ಇಂದಿನ ರಾಷ್ಟ್ರೀಯತೆಯ ಕಲ್ಪನೆ ಹಿಂದಿನ ಕಾಲದಲ್ಲಿ ಇರದಿದ್ದರೂ ಕಾಶ್ಮೀರದ ಮಹಾದೇವ ಭೂಪಾಲ (ಮೋಳಿಗೆ ಮಾರಯ್ಯ) ಮುಂತಾದವರು ಬಸವಣ್ಣನವರ ಪರ್ಯಾಯ ಸಮಾಜದಲ್ಲಿ ಸ್ಥಾನ ಪಡೆದಿದ್ದರು.)

೧೬. ದೇಶ, ಕುಲ ಮತ್ತು ಧರ್ಮಗಳನ್ನು ಮೀರಿ ಮದುವೆ ಮಾಡಿಕೊಳ್ಳುವ ಹಕ್ಕಿದೆ.
(ಈ ಹಕ್ಕನ್ನು ಶರಣರು ಚಲಾಯಿಸಿದ ಕಾರಣ ಹರಳಯ್ಯ ಮಧುವರಸರಿಗೆ ಎಳೆಹೂಟೆ ಶಿಕ್ಷೆ ವಿಧಿಸಲಾಯಿತು.)

೧೭. ಪ್ರತಿಯೊಬ್ಬರಿಗೂ ಆಸ್ತಿಯ ಹಕ್ಕಿದೆ.
("ನಾನು ಆರಂಬವ ಮಾಡುವೆನಯಾ ಗುರುಪೂಜೆಗೆಂದು, ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು, ನಾನು ಪರಸೇವೆಯ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು" ಎಂದು ಬಸವಣ್ಣನವರು ಹೇಳುತ್ತಾರೆ. ಆಸ್ತಿಯ ಹಕ್ಕಿನೊಂದಿಗೆ ಸಾಮಾಜಿಕ ಜವಾಬ್ದಾರಿಯ ಬಗ್ಗೆಯೂ ತಿಳಿಸುತ್ತಾರೆ.

೧೮. ಪ್ರತಿಯೊಬ್ಬರು ವಿಚಾರ ಸ್ವಾತಂತ್ರ್ಯ ಮತ್ತು ಧಾರ್ಮಿಕ ಸ್ವಾತಂತ್ರ್ಯ ಪಡೆದಿದ್ದಾರೆ.
(ಬಸವಧರ್ಮ ವಿಚಾರ ಸ್ವಾತಂತ್ರ್ಯದ ಮೇಲೆ ನಿಂತಿದೆ. "ಗಂಡ ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿ ಮಸಣಿಯ ಭಕ್ತೆ" ಎಂದು ಬಸವಣ್ಣನವರು ಹೇಳುವಲ್ಲಿ ಧಾರ್ಮಿಕ ಸ್ವಾತಂತ್ರ್ಯದ ಸೂಚನೆ ಇದೆ.)

೧೯. ಪ್ರತಿಯೊಬ್ಬರು ಅಭಿಪ್ರಾಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಪಡೆದಿದ್ದಾರೆ.
(ಪ್ರತಿಯೊಬ್ಬ ಶರಣರು ಅನುಭವ ಮಂಟಪದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಅನುಭವಿಸಿದ್ದು ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ವ್ಯಕ್ತಪಡಿಸಿದ್ದಾರೆ.)

೨೦. ಪ್ರತಿಯೊಬ್ಬರು ಶಾಂತಿಯುತವಾಗಿ ಸಭೆ ಸೇರುವ ಸ್ವಾತಂತ್ರ್ಯ ಹೊಂದಿದ್ದಾರೆ.
(ಅನುಭವ ಮಂಟಪವು ಶಾಂತಿಯುತವಾಗಿ ಸಭೆ ಸೇರುವ ತಾಣವಾಗಿತ್ತು. ಈ ಸ್ವಾತಂತ್ರ್ಯವನ್ನು ಶರಣರು ತಮ್ಮ ಜವಾಬ್ದಾರಿಯುತ ನಡೆವಳಿಕೆಯಿಂದ ಸಾಧಿಸಿದ್ದರು.)

೨೧. ತಮ್ಮ ದೇಶದ ಸರ್ಕಾರದಲ್ಲಿ ಭಾಗಿಯಾಗುವ ಹಕ್ಕನ್ನು ಪ್ರತಿಯೊಬ್ಬರು ಪಡೆದಿದ್ದಾರೆ.
(ಬಸವಣ್ಣನವರು ಬಿಜ್ಜಳನ ಪ್ರಧಾನಿಯಾಗಿದ್ದರು.)

೨೨. ಪ್ರತಿಯೊಬ್ಬರು ಸಾಮಾಜಿಕ ಭದ್ರತೆಯ ಹಕ್ಕನ್ನು ಪಡೆದಿದ್ದಾರೆ.
(ಶರಣ ಸಂಕುಲದಿಂದಾಗಿ ಶರಣರು ಸಾಮಾಜಿಕ ಭದ್ರತೆ ಹೊಂದಿದ್ದರು.)

೨೩. ಪ್ರತಿಯೊಬ್ಬರು ದುಡಿಯುವ ಮತ್ತು ಕಾರ್ಮಿಕ ಸಂಘವನ್ನು ರಚಿಸುವ ಹಕ್ಕನ್ನು ಪಡೆದಿದ್ದಾರೆ.
(ಬಸವಣ್ಣನವರಿಂದಾಗಿ ಕಾಯಕವು ಪ್ರತಿಯೊಬ್ಬರ ವ್ಯಕ್ತಿತ್ವದ ಭಾಗವಾಗಿತ್ತು. ಕಾಯಕಜೀವಿಗಳ ಸಮೂಹವೇ ಶರಣಸಂಕುಲ.)

೨೪. ಪ್ರತಿಯೊಬ್ಬರು ವಿಶ್ರಾಂತಿಯ ಹಕ್ಕನ್ನು ಪಡೆದಿದ್ದಾರೆ.
(ಬಸವಣ್ಣನವರ ಕಾಲದಲ್ಲಿ ಸ್ವತಂತ್ರ ಕಾಯಕವು ಸಹಜವಾಗಿಯೇ ವಿಶ್ರಾಂತಿಯ ಹಕ್ಕನ್ನು ಒದಗಿಸಿತ್ತು.)

೨೫. ಗುಣಮಟ್ಟದ ಬದುಕಿನ ಹಕ್ಕನ್ನು ಪ್ರತಿಯೊಬ್ಬರು ಪಡೆದಿದ್ದಾರೆ.
("ಮನೆ ನೋಡಾ ಬಡವರು; ಮನ ನೋಡಾ ಘನ. ಸೋಂಕಿನಲ್ಲಿ ಶುಚಿ; ಸರ್ವಾಂಗ ಕಲಿಗಳು. ಪಸರಕ್ಕನುವಿಲ್ಲ; ಬಂದ ತತ್ಕಾಲಕ್ಕೆ ಉಂಟು, ಕೂಡಲಸಂಗನ ಶರಣರು ಸ್ವತಂತ್ರಧೀರರು." ಎಂದು ಬಸವಣ್ಣನವರು ಶರಣರ ಘನತೆವೆತ್ತ ಸರಳ ಬದುಕನ್ನು ಕೊಂಡಾಡುತ್ತಾರೆ.)

೨೬. ಪ್ರತಿಯೊಬ್ಬರಿಗೂ ಶಿಕ್ಷಣ ಪಡೆಯುವ ಹಕ್ಕಿದೆ.
(ಎಲ್ಲ ಕಾಯಕ ಜೀವಿಗಳು ವಚನ ರಚನೆ ಮಾಡುವಂಥ ಶಿಕ್ಷಣವನ್ನು ಪಡೆಯುವ ವ್ಯವಸ್ಥೆಯನ್ನು ಬಸವಣ್ಣನವರು ಮಾಡಿದ್ದರು.)

೨೭. ಸಮಾಜದ ಸಾಂಸ್ಕೃತಿಕ ಬದುಕಿನಲ್ಲಿ ಪಾಲ್ಗೊಳ್ಳುವ ಹಕ್ಕು ಪ್ರತಿಯೊಬ್ಬರಿಗೂ ಇದೆ.
(ಜಾತಿ ಮತಗಳನ್ನು ಮೀರಿದ ಶರಣರು ಹೊಸ ಸಮಾಜದ ಸಂಸ್ಕೃತಿಯನ್ನು ನಿರ್ಮಿಸಿ ಇತಿಹಾಸ ಸೃಷ್ಟಿಸಿದರು.)

೨೮. ಮಾನವ ಹಕ್ಕುಗಳ ಜಾಗತಿಕ ಘೋಷಣೆ ಪ್ರಕಾರ ಸಾಮಾಜಿಕ ಮತ್ತು ಅಂತರ್ರಾಷ್ಟ್ರೀಯ ವ್ಯವಸ್ಥೆಯನ್ನು ಬಯಸುವ ಹಕ್ಕು ಪ್ರತಿಯೊಬ್ಬರಿಗೆ ಇದೆ.
(ಶರಣರು ತಮ್ಮ ಈ ಸರ್ವ ಸಮಾನತೆಯ ಸಮಾಜ ಲೋಕದಲ್ಲಿ ಹಬ್ಬಲಿ

ಎಂದು ಆಶಿಸಿದ್ದರು. ಆ ಕಾಲದ ಬೇರೆ ಬೇರೆ ದೇಶಗಳ ಜನ ಕಲ್ಯಾಣಕ್ಕೆ ಬಂದು ಶರಣ ಜೀವನ ಸಾಗಿಸಿದರು.)

೨೯. ಸಮಾಜಕ್ಕೆ ಸೇವೆ ಸಲ್ಲಿಸುವ ಕರ್ತವ್ಯ ಪ್ರತಿಯೊಬ್ಬರದಾಗಿದೆ.
(ಶರಣರು ದಾಸೋಹದ ಮೂಲಕ ಸಮಾಜ ಸೇವೆಯ ಕರ್ತವ್ಯ ಪಾಲನೆ ಮಾಡಿದರು.)

೩೦. ಮೇಲೆ ತಿಳಿಸಿದ ಮಾನವ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಹಾಳುಮಾಡುವಂಥ ವ್ಯಾಖ್ಯಾನ ಮಾಡಬಾರದು.
(ಶರಣರು ತಮ್ಮ ಬಲಿದಾನ ಮಾಡಿದರೆ ಹೊರತು ತಮ್ಮ ತತ್ತ್ವಗಳಿಂದ ವಿಮುಖರಾಗಲಿಲ್ಲ.)

ಹೀಗೆ ಬಸವಾದಿ ಪ್ರಮಥರು ೧೨ನೇ ಶತಮಾನದಲ್ಲೇ ಮಾನವ ಹಕ್ಕುಗಳ ಪ್ರತಿಪಾದಕರಾಗಿ ಕಂಗೊಳಿಸುತ್ತಿದ್ದಾರೆ. ಅವರ ಅಭೂತಪೂರ್ವ ಸಾಧನೆ ಇದಾಗಿದೆ. ಈ ವಿಚಾರಗಳು ಪಾಶ್ಚಿಮಾತ್ಯ ಜಗತ್ತಿಗೆ ಹೊಳೆಯಲು ೨೦ನೇ ಶತಮಾನದವರಗೆ ಕಾಯಬೇಕಾಯಿತು. ಅಲ್ಲದೆ ಎರಡು ಮಹಾಯುದ್ಧಗಳನ್ನು ಎದುರಿಸಬೇಕಾಯಿತು.

ಭಾರತದ ಸಂವಿಧಾನ ಕೂಡ ಈ ಮಾನವ ಹಕ್ಕುಗಳ ಅಂಶಗಳನ್ನು ಒಳ ಗೊಂಡಿರುವುದರಿಂದ ಬಸವಣ್ಣನವರ ವಚನಗಳು ಭಾರತದ ಸಂವಿಧಾನದ ಜೀವಾಳ ವಾಗಿವೆ. ಬಸವಣ್ಣನವರ ವಚನಗಳಂತೆ ನಡೆದರೆ ಅಂತರ್ರಾಷ್ಟ್ರೀಯ ಮಟ್ಟದ ಮಾನವ ಹಕ್ಕುಗಳನ್ನು ಮತ್ತು ನಮ್ಮ ದೇಶದ ಸಂವಿಧಾನವನ್ನು ಏಕಕಾಲಕ್ಕೆ ಗೌರವಿಸಿದಂತಾಗುತ್ತದೆ. ಬಸವಣ್ಣನವರ ವಚನಗಳಿಗೆ ವಿರುದ್ಧವಾಗಿ ನಡೆದರೆ ಸಂವಿಧಾನಬಾಹಿರ ಕೃತ್ಯವಾಗುತ್ತದೆ. ಅಲ್ಲದೆ ಅಂತರ್ರಾಷ್ಟ್ರೀಯ ಮಾನವ ಹಕ್ಕುಗಳಿಗೆ ಅವಮಾನ ಮಾಡಿದಂತಾಗುತ್ತದೆ. ಕಲ್ಯಾಣ ಹತ್ಯಾಕಾಂಡಕ್ಕೆ ಕಾರಣವಾದ ಹರಳಯ್ಯ ಮಧುವರಸ ಮಕ್ಕಳ ಮದುವೆಯನ್ನು ಇಂದು ಅಂತರ್ರಾಷ್ಟ್ರೀಯ ಮಾನವ ಹಕ್ಕುಗಳು ಮತ್ತು ಭಾರತದ ಸಂವಿಧಾನ ಜೊತೆಯಾಗಿಯೇ ಗೌರವಿಸುತ್ತವೆ.

ಅನುಭವ ಮಂಟಪದ ಮೂಲಕ ಸಂಸದೀಯ ಪ್ರಜಾಪ್ರಭುತ್ವದ ಬೀಜಗಳು ಈ ನೆಲದಲ್ಲಿ ಮೊಳಕೆ ಒಡೆದವು ಮತ್ತು ಮಾನವ ಹಕ್ಕುಗಳ ಹೂಗಳು ಅರಳಿದವು. ಹೀಗೆ ಬಸವಣ್ಣನವರು ಈ ನೆಲದ ಪ್ರಜಾಪ್ರಭುತ್ವ ಮತ್ತು ಮಾನವ ಹಕ್ಕುಗಳ ಮೂಲ ಪುರುಷರಾದರು.

●

# ಲಿಂಗವಂತ ಧರ್ಮದಲ್ಲಿ ಏನುಂಟು ಏನಿಲ್ಲ?

ಲಿಂಗವಂತ ಧರ್ಮದ ಬಹುಪಾಲು ಅನುಯಾಯಿಗಳು ಕಾಲದ ಪ್ರವಾಹಕ್ಕೆ ಸಿಲುಕಿ ತಮ್ಮ ಧರ್ಮದ ಮೂಲಸತ್ತ್ವದಿಂದ ತಮಗರಿಯದಂತೆಯೆ ದೂರ ಸಾಗುತ್ತಿದ್ದಾರೆ. ಬಹುಶಃ ಜಗತ್ತಿನ ವಿವಿಧ ಧರ್ಮಗಳ ಅನುಯಾಯಿಗಳನೇಕರು ಇಂಥ ವಿಷಮಸ್ಥಿತಿಯ ಗೊಂದಲಗಳ ಮಧ್ಯೆ ಮುಂದುವರಿಯುತ್ತಿದ್ದಾರೆ. ವೈಜ್ಞಾನಿಕ ಮನೋಭಾವದಿಂದ ಕೂಡಿದ ಕಾಯಕಜೀವಿ ಶರಣರ ಬದುಕಿನ ಕ್ರಮದ ಮೂಲಕ ಜೀವನವಿಧಾನವಾದಂಥ ಲಿಂಗವಂತ ಧರ್ಮದ ತಿರುಳನ್ನು ಇಂದು ಪ್ರತಿಯೊಬ್ಬರು ಅರಿತುಕೊಳ್ಳುವುದು ಅವಶ್ಯವಾಗಿದೆ. ಆ ಮೂಲಕ ಹಿಂಸೆ, ಸುಲಿಗೆ ಮತ್ತು ಅಸಮಾನತೆಗಳಿಲ್ಲದ ಶಾಂತಿಯುತವಾದ ಸಮೃದ್ಧ ಬದುಕನ್ನು ಪಡೆಯಬೇಕಿದೆ. ಈ ಹಿನ್ನೆಲೆಯಲ್ಲಿ ಲಿಂಗವಂತ ಧರ್ಮಕ್ಕೆ ಸಂಬಂಧಿಸಿದ ಕೆಲವೊಂದು ಮುಖ್ಯ ಪ್ರಶ್ನೆಗಳಿಗೆ ಉತ್ತರಿಸುವುದು ಅವಶ್ಯವಾಗಿದೆ.

**ಲಿಂಗವಂತ ಧರ್ಮದ ಮೂಲಾಧಾರ ಯಾವುದು?**

ಕಾಯಕವೇ ಲಿಂಗವಂತ ಧರ್ಮದ ಮೂಲಾಧಾರವಾಗಿದೆ. ಇಡೀ ನಿಸರ್ಗ ಕಾಯಕದ ಉತ್ಪಾದನೆಯಾಗಿದೆ. ಅಂತೆಯೆ "ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು" ಎಂದು ಹೇಳುವ ಮೂಲಕ ಆಯ್ದಕ್ಕಿ ಮಾರಯ್ಯನವರು 'ಕಾಯಕವೇ ಕೈಲಾಸ' ಎಂದು ತಿಳಿಸಿದ್ದಾರೆ.

'ಲೋಕದ ಚೇಷ್ಟೆಗೆ ರವಿ ಬೀಜ' ಎಂದು ಅಕ್ಕಮಹಾದೇವಿ ಹೇಳುತ್ತಾಳೆ. ಸೃಷ್ಟಿ ರೂಪುಗೊಳ್ಳುವ ಕ್ರಿಯೆಯಲ್ಲಿ ಸೂರ್ಯನ ಪಾತ್ರವನ್ನು ಅಕ್ಕ ಸೂಚಿಸುತ್ತಾಳೆ. ಸೂರ್ಯನದು ಬೆಳಕು ಕೊಡುವ ಕಾಯಕ. ಚಂದ್ರನದು ಬೆಳದಿಂಗಳು ಕೊಡುವ

ಕಾಯಕ. ವಾಯುವಿನದು ಸೃಷ್ಟಿಯನ್ನು ಜೀವಂತವಾಗಿಡುವ ಕಾಯಕ, ಭೂಮಿ ಮತ್ತು ಜಲಕ್ಕೆ ನಮ್ಮೆಲ್ಲರನ್ನು ಸಲಹುವ ಕಾಯಕ. ಮೋಡಗಳಿಗೆ ಮಳೆ ಸುರಿಸವ ಕಾಯಕ, ಲೋಕಕ್ಕೆ ನೀರುಣಿಸುತ್ತ ಸಮುದ್ರ ಸೇರಿ ಉಪ್ಪಿನಂಶವನ್ನು ಸಮತೋಲನದಲ್ಲಿ ಇಡುವ ಮೂಲಕ ಜಲಚರಗಳನ್ನು ರಕ್ಷಿಸುವ ಕಾಯಕ ನದಿಯದು. ಹೀಗೆ ಕಾಯಕವು ನಿಸರ್ಗಧರ್ಮವಾಗಿದೆ. ಈ ಪ್ರಕಾರ ಲಿಂಗವಂತ ಧರ್ಮವು ನಿಸರ್ಗಧರ್ಮವಾಗಿರುವುದ ರಿಂದ ಕಾಯಕವು ಅದರ ಮೂಲಾಧಾರವಾಗಿದೆ.

ಬಸವಧರ್ಮ ಎಂಬ ಲಿಂಗವಂತ ಧರ್ಮವು ಕಾಯಕ ಪ್ರಧಾನ ಧರ್ಮ ವಾಗಿರುವುದರಿಂದ ಕಾಯಕ ಜೀವಿಗಳೇ ಈ ಧರ್ಮದ ಮೂಲಪುರುಷರು. ಬಸವಣ್ಣ ನವರ ಅನುಭವದ ಪಾತ್ರೆಯನ್ನು ತುಂಬಿಸಿದವರೇ ಕಾಯಕಜೀವಿಗಳು. "ಭಕ್ತಿ ಇಲ್ಲದ ಬಡವ ನಾನಯ್ಯಾ. ಕಕ್ಕಯ್ಯನ ಮನೆಯಲ್ಲೂ ಬೇಡಿದೆ; ಚೆನ್ನಯ್ಯನ ಮನೆಯಲ್ಲೂ ಬೇಡಿದೆ" ಎಂದು ಬಸವಣ್ಣನವರು ಮನದುಂಬಿ ಹೇಳಿದ್ದಾರೆ. ಉನ್ನತ ಕುಲ, ಉನ್ನತ ಶಿಕ್ಷಣ, ಉನ್ನತ ವರ್ಗ ಮತ್ತು ಪ್ರಧಾನ ಮಂತ್ರಿಯಂಥ ಉನ್ನತ ಹುದ್ದೆಯನ್ನು ಹೊಂದಿ ಕ್ರಿಯಾಶೀಲರಾಗಿದ್ದ ಬಸವಣ್ಣನವರು ಇವುಗಳನ್ನೆಲ್ಲ ಲೆಕ್ಕಿಸದೆ ಹೀಗೆ ಕೆಳಜಾತೀಕರಣಕ್ಕೆ ಒಳಗಾಗಿ ಬಸವಳಿದ ಜನರ ಕಣ್ಣೀರನ್ನು ಒರೆಸಲು ಮುಂದಾದರು. ಸಕಲ ವೇದ, ಶಾಸ್ತ್ರ, ಉಪನಿಷತ್, ಪುರಾಣ ಮತ್ತು ಆಗಮಗಳಲ್ಲಿ ಪಾರಂಗತ ರಾಗಿದ್ದರೂ ಹೊಸ ಜಗತ್ತಿನ ಸಿದ್ಧಾಂತ ರೂಪಿಸುವಲ್ಲಿ ಕಾಯಕಜೀವಿಗಳ ಅನುಭವವನ್ನೇ ಪ್ರಮಾಣವಾಗಿ ಸ್ವೀಕರಿಸಿದರು.

ಲಕ್ಷಾಂತರ ಜನರ ಅನುಭವದಿಂದ ಒಂದು ನಾಗರೀಕತೆಯ ನಿರ್ಮಾಣ ವಾಗುವುದು. ಅವರೆಲ್ಲರ ಅನುಭವದ ಸಾರವಾದ ಅನುಭಾವದಿಂದ ಮಾನವಸಂಸ್ಕೃತಿ ಅರಳುವುದು. ಹೀಗೆ ನಿರ್ಮಾಣವಾದ ನಾಗರೀಕತೆಯಲ್ಲಿ ಅರಳಿದ ಸಂಸ್ಕೃತಿಯಲ್ಲಿ ವಿಶ್ವಮಾನವನ ಉದಯವಾಗುವುದು. ನಮ್ಮ ಬಸವಾದಿ ಶರಣರು ಅಂಥ ವಿಶ್ವಮಾನವರು.

ಕಾಯಕ, ಪ್ರಸಾದ ಮತ್ತು ದಾಸೋಹ ವ್ಯವಸ್ಥೆಯನ್ನು ಲಿಂಗವಂತ ಧರ್ಮ ಹೊಂದಿದೆ. ಗುರು, ಲಿಂಗ ಮತ್ತು ಜಂಗಮಕ್ಕೆಲ್ಲ ಕಾಯಕ ಅವಶ್ಯವಾಗಿದೆ. ಲಿಂಗವಂತ ಧರ್ಮದಲ್ಲಿ ಅರಿವೇ ಗುರು. ಅರಿವಿನ ಮೂಲವಾದ ಸಮತಾ ತತ್ತ್ವವೇ ಲಿಂಗತತ್ತ್ವ ಸಕಲ ಜೀವಾತ್ಮರಿಂದ ಕೂಡಿರುವ ಲೋಕವೇ ಜಂಗಮ. ಕಾಯಕದಿಂದ ಪಡೆದದ್ದನ್ನು ಲಿಂಗಪ್ರಸಾದವೆಂದು ಸ್ವೀಕರಿಸಬೇಕು. ಆ ಪಡೆದದ್ದನ್ನು ಲಿಂಗದ ವಿರಾಟ್ ಸ್ವರೂಪವಾದ

ಸಮಾಜವೆಂಬ ಜಂಗಮಕ್ಕೆ ದಾಸೋಹ ಎಂಬ ಸಾಮಾಜಿಕ ವಿತರಣಾ ವ್ಯವಸ್ಥೆ ಮೂಲಕ ಕೊಟ್ಟು ಅಸಮಾನತೆಯನ್ನು ತೊಡೆದು ಹಾಕಬೇಕು.

ಹೀಗೆ ಕಾಯಕವು ಲಿಂಗವಂತ ಧರ್ಮದ ಮೂಲಾಧಾರವಾಗಿದೆ. 'ಮಾನವನ ಎಲ್ಲ ಇರುವಿಕೆಗೆ ದುಡಿಮೆಯೆ ಮೊಟ್ಟ ಮೊದಲ ಆಧಾರ. ಇದು ಎಷ್ಟರಮಟ್ಟಿಗೆ ನಿಜವೆಂದರೆ ಒಂದರ್ಥದಲ್ಲಿ ದುಡಿಮೆಯೆ ಮನುಷ್ಯನನ್ನು ಸೃಷ್ಟಿಸಿತು' ಎಂದು ೧೯ನೇ ಶತಮಾನದ ಫ್ರೆಡ್ರಿಕ್ ಎಂಗೆಲ್ಸ್ ಅವರು 'ದ ಪಾರ್ಟ್ ಪ್ಲೇಯ್ಡ್ ಬೈ ಲೇಬರ್ ಇನ್ ದ ಟ್ರಾಂಜಿಶನ್ ಫ್ರಾಮ್ ಏಪ್ ಟು ಮ್ಯಾನ್' ಎಂಬ ಪುಸ್ತಕದಲ್ಲಿ ಬರೆದಿದ್ದಾರೆ. ವಾನರ ನರ ಆಗುವಲ್ಲಿ ದುಡಿಮೆಯ ಪಾತ್ರ ಹಿರಿದಾಗಿದೆ. ಆತನ ಅನುಭವ ಮತ್ತು ಅನುಭಾವಕ್ಕೆ ಕೂಡ ದುಡಿಮೆಯೆ ಮೂಲ ಕಾರಣವಾಗಿದೆ ಎಂದು ಎಂಗೆಲ್ಸ್ ವಿವರಿಸಿದ್ದಾರೆ. ಕಾರ್ಲ್ ಮಾರ್ಕ್ಸ್ ಮತ್ತು ಎಂಗೆಲ್ಸ್ ಅವರು ೧೯ನೇ ಶತಮಾನದಲ್ಲಿ ರೂಪಿಸಿದ ಸಮತಾವಾದ ಕೂಡ ದುಡಿಯುವ ವರ್ಗದ ಅನುಭವದ ಮೇಲೆಯೆ ನಿಂತಿದೆ.

## ಲಿಂಗವಂತ ಧರ್ಮದಲ್ಲಿ ಅಧ್ಯಾತ್ಮ ಮತ್ತು ಯೋಗದ ಸ್ಥಾನವೇನು?

ಶರಣರು ಸಕಾರಾತ್ಮಕವಾಗಿ ಅಧ್ಯಾತ್ಮ ಪದಪ್ರಯೋಗ ಮಾಡುವುದಿಲ್ಲ. ಅವರಿಗೆ ಇಷ್ಟಲಿಂಗಪೂಜೆಯೆ ಶಿವಯೋಗವಾಗಿದೆ. ಶರಣರ ಪ್ರಕಾರ ಯೋಗಗಳಲ್ಲಿ ಶಿವಯೋಗವೇ ಪರಿಪೂರ್ಣವಾದುದು.

**"ಮಾಡಿ ಮಾಡಿ ನಿತ್ಯ ಲಿಂಗಾರ್ಚನೆಯ,**
**ಮಾಡಿ ಮಾಡಿ ನಿತ್ಯ ಜಂಗಮಾರ್ಚನೆಯ,**
**ಮಾಡಿ ಮಾಡಿ ಎಂದು ವಿಸ್ತಾರವೆಂದು ಮಾಡಿ ಕೂಡಿದವರೆಲ್ಲ ನಿತ್ಯರಾದರು.**
**ಮಾಡದೆ, ಕೂಡದೆ ಯೋಗವೆಂದು**
**ಅಧ್ಯಾತ್ಮವ ನುಡಿದು ಶಿವಪೂಜೆಗೆ ದೂರವಾಗಬೇಡ,**
**ಅಲ್ಲದೆ ಕೆಲವರೊಳಗೆ ಆಡಿ ಕಪಿಲಸಿದ್ಧಮಲ್ಲಿಕಾರ್ಜುನನ ಚಿತ್ತಕ್ಕೆ ದೂರವಾಗದೆ**
**ಶಿವಾರ್ಚನೆಯ ಮಾಡಿದಡೆ ದಿವ್ಯಯೋಗಿಯಪ್ಪೆ"**

ಎಂದು ಸಿದ್ಧರಾಮೇಶ್ವರರು ಹೇಳುವ ಮೂಲಕ ಇಷ್ಟಲಿಂಗಯೋಗದ ರಹಸ್ಯವನ್ನು ತಿಳಿಸುತ್ತಾರೆ. ಲಿಂಗವಂತ ಧರ್ಮದಲ್ಲಿ ಎರಡು ಪ್ರಕಾರದ ಶಿವಯೋಗ ವಿಧಾನಗಳಿವೆ. ಮೊದಲನೆಯದು ಆತ್ಮಕಲ್ಯಾಣಕ್ಕಾಗಿ ಇರುವ ಇಷ್ಟಲಿಂಗಯೋಗ. ಎರಡನೆಯದು ಲೋಕಕಲ್ಯಾಣಕ್ಕಾಗಿ ಇರುವ ಜಂಗಮಲಿಂಗಯೋಗ. ಇಷ್ಟಲಿಂಗಯೋಗದಲ್ಲಿ ಶರಣರು

ಇಡೀ ವಿಶ್ವವನ್ನು ತಮ್ಮೊಳಗೆ ತುಂಬಿಕೊಳ್ಳುತ್ತಾರೆ. ಇದುವೆ ಲಿಂಗಾರ್ಚನೆ. ತಮ್ಮೊಳಗಿನ ಮಹಾಘನದ ಜೊತೆ ಅವರು ಒಂದಾದಾಗ ಆ ಮಹಾಘನದ ಒಂದಂಶವಾದ ಇಡೀ ವಿಶ್ವ ಅವರೊಳಗೆ ಸಹಜವಾಗಿಯೆ ಒಂದಾಗುವುದು. ವಿಶ್ವದ ಪ್ರತಿಯೊಂದು ಅಂಶದಲ್ಲಿ ತಾವು ತಮ್ಮೊಳಗಿನ ಘನದ ಜೊತೆಗೂಡಿ ಇರುವ ಸತ್ಯದ ಅರಿವಾಗುವುದು. ಆಗ ಅವರಿಗೆ ಎಲ್ಲವೂ ಶಿವಸ್ವರೂಪವಾಗೇ ಕಾಣತೊಡಗುವುದು. ಸಕಲಜೀವಾತ್ಮರಿಗೆ ಲೇಸನೆ ಬಯಸಿ ಕಾರ್ಯೋನ್ಮುಖವಾಗುವುದೇ ಜಂಗಮಯೋಗ. ಇದುವೆ

ಜಂಗಮಾರ್ಚನೆ. ಅಂದರೆ ಲೋಕಕಲ್ಯಾಣಕ್ಕಾಗಿ ಕಾಯಕ, ಪ್ರಸಾದ ಮತ್ತು ದಾಸೋಹಂಭಾವದೊಂದಿಗೆ ಜೀವಿಸುತ್ತ ಸರ್ವಸಮತ್ವದ ವ್ಯವಸ್ಥೆಗಾಗಿ ಬದುಕನ್ನೇ ಮುಡಿಪಿಡುವುದು. ಹೀಗೆ ಆತ್ಮಾನುಸಂಧಾನ ಮತ್ತು ಲೋಕಾನುಸಂಧಾನದೊಂದಿಗೆ ಕ್ರಿಯಾಶೀಲವಾಗಿ ಬದುಕುವವರೇ ದಿವ್ಯಯೋಗಿಗಳು. ಇದುವೆ ಶಿವಾರ್ಚನೆ. ಅಂದರೆ ಒಳಲೋಕ ಮತ್ತು ಹೊರಲೋಕ ಒಂದಾಗಿಸಿ ಸಮತೆಯನ್ನು ಸಾಧಿಸುವುದು.

"ಲಿಂಗಾರ್ಚನಂ ನ ಕರ್ತವ್ಯಂ, ಜಂಗಮಾರ್ಚನಂ ಕರ್ತವ್ಯಂ" ಎಂದು ಬಸವಣ್ಣನವರು ತಿಳಿಸಿದ್ದಾರೆ. ನಮ್ಮ ಆತ್ಮೋದ್ಧಾರ ಕರ್ತವ್ಯವಲ್ಲ. ಅದು ಸ್ವಸಂತೋಷಕ್ಕಾಗಿ ಇರುವಂಥದ್ದು. ಲೋಕೋದ್ಧಾರವೇ ಕರ್ತವ್ಯ. ಅದುವೇ ಜಂಗಮಾರ್ಚನ. "ನಿನ್ನ ನಾನರಿಯದ ಮುನ್ನ ನೀನೆಲ್ಲಿ ಇದ್ದೆ. ಎನ್ನೊಳಗಿದ್ದು ನಿನ್ನ ತೋರಲಿಕೆ ನೀನೆ ರೂಪಾದೆ. ಇನ್ನು ಜಂಗಮವೇ ಲಿಂಗವೆಂದು ನಂಬಿದೆ" ಎಂದು ಹೇಳುವ ಮೂಲಕ ಬಸವಣ್ಣನವರು ಸಕಲಜೀವಾತ್ಮರ ಸಮೂಹವೇ ದೇವರೆಂದು ಸೂಚಿಸುತ್ತಾರೆ. ಇಂಥ ಪ್ರಜ್ಞೆಯನ್ನು ಹೊಂದುವ ಉದ್ದೇಶದಿಂದ ಅಂತರಂಗದ ಅರಿವನ್ನು ಪಡೆಯುವುದಕ್ಕಾಗಿಯೇ ಇಷ್ಟಲಿಂಗ ಪೂಜೆ ಇರುವುದು. ಸಮರತಿ (ಹೆಣ್ಣು ಗಂಡು ಸಮಾನ), ಸಮಕಳೆ (ಕೆಳಜಾತಿ ಮತ್ತು ಮೇಲ್ಜಾತಿ ಸಮಾನ) ಸಮಸುಖ (ಬಡವರು ಮತ್ತು ಶ್ರೀಮಂತರು ಸಮಾನ) ಎಂಬುದನ್ನು ಅರಿಯುವುದೇ ಇಷ್ಟಲಿಂಗ ಪೂಜಾಫಲ ಎಂದು ಬಸವಣ್ಣನವರು ಸಾರಿದ್ದಾರೆ.

ಎಲ್ಲ ಜೀವಗಳ ಮಧ್ಯೆ ಸಮಾನತೆಯನ್ನು ಸಾಧಿಸಬೇಕಿದೆ. "ಅರಿವೇ ಗುರು, ಆಚಾರವೇ ಶಿಷ್ಯ, ಜ್ಞಾನವೇ ಲಿಂಗ, ಪರಿಣಾಮವೇ ತಪ, ಸಮತೆ ಎಂಬುದೇ ಯೋಗ ನೋಡಾ" ಎಂದು ಹಾವಿನಾಳ ಕಲ್ಲಯ್ಯನವರು ಸಮತಾವಾದದ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ.

ಗುಹೆಗಳಲ್ಲಿ, ಅರಣ್ಯಗಳಲ್ಲಿ ಮತ್ತು ಹಿಮಾಲಯದಂಥ ಪರ್ವತಗಳಲ್ಲಿ ಏಕಾಂಗಿಯಾಗಿ ಉಳಿದು ಧ್ಯಾನಿಸುತ್ತ ಅಧ್ಯಾತ್ಮ ಸಾಧನೆ ಮಾಡುವುದನ್ನು ಶರಣರು

ಅಲ್ಲಗಳೆಯುತ್ತಾರೆ. ಲಿಂಗವಂತ ಧರ್ಮದಲ್ಲಿ ಇಂಥ ಅಧ್ಯಾತ್ಮದ ಬದಲು ಅನುಭಾವದ ಪರಿಕಲ್ಪನೆ ಇದೆ. ಈ ಅನುಭಾವವನ್ನು ಹಿಮಾಲಯಕ್ಕೆ ಹೋಗಿ ಪಡೆದುಕೊಳ್ಳುವಂಥದ್ದಲ್ಲ. ಕಾಯಕದ ಅನುಭವದ ಮೂಲಕ ಸಾಧಿಸುವಂಥದ್ದು. ಅನೇಕ ಶರಣರು ಅನುಭಾವವನ್ನು ಸೂಚಿಸಲು ತಮ್ಮ ದೈನಂದಿನ ಕಾಯಕದ ಅನುಭವ ಮತ್ತು ಆ ಕಾಯಕಕ್ಕೆ ಬೇಕಾದ ವಸ್ತುಗಳನ್ನೇ ಬಳಸುತ್ತಾರೆ. "ಹದ ಮಣ್ಣಲ್ಲದೆ ಮಡಕೆಯಾಗದು" ಎಂದು ಕುಂಬಾರ ಗುಂಡಯ್ಯನವರ ಪುಣ್ಯಸ್ತ್ರೀ ಕೇತಲದೇವಿ ಹೇಳುತ್ತಾಳೆ. "ಕೈ ತಪ್ಪಿ ಕೆತ್ತಲು ಕಾಲಿಗೆ ಮೂಲ" ಎಂದು ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ ತಿಳಿಸುತ್ತಾಳೆ. ಈ ರೀತಿ ಶರಣರು ಅನುಭವದ ಮೂಲಕ ಅನುಭಾವವನ್ನು ಸಾಧಿಸುತ್ತಾರೆ. 'ಬದುಕು ಹದಗೊಂಡಾಗಲೆ ಭಕ್ತನ ವ್ಯಕ್ತಿತ್ವ ವಿಕಸನಗೊಳ್ಳುತ ಸಾಗುವುದು. ಕೊನೆಯಲ್ಲಿ ಆತ ಐಕ್ಯಸ್ಥಲವನ್ನು ತಲುಪುವನು.' ಎಂಬುದನ್ನು ಕೇತಲದೇವಿ ಸೂಚಿಸುತ್ತಾಳೆ. 'ಅದಕ್ಕಾಗಿ ಎಚ್ಚರಿಕೆಯಿಂದ ಬದುಕದಿದ್ದರೆ ಅನಾಹುತವಾಗುವುದು' ಎಂದು ಕಾಳವ್ವೆ ತಿಳಿಸುತ್ತಾಳೆ. ಹೀಗೆ ಅನ್ಯೋಕ್ತಿಗಳ ಮೂಲಕ ಶರಣರು ಅನುಭಾವದ ಮಟ್ಟಕ್ಕೆ ಏರುವುದನ್ನು ತಿಳಿಸುತ್ತಾರೆ. ಶರಣರ ಪ್ರಕಾರ ವಸ್ತುಜಗತ್ತಿನ ಅನುಭವವಿಲ್ಲದೆ ಪರವಸ್ತುವಿನ ಅನುಭಾವ ಆಗದು.

## ಲಿಂಗವಂತ ಧರ್ಮದಲ್ಲಿ ಗುರು-ಶಿಷ್ಯ ಸಂಬಂಧ ಎಂತಹುದು?

ಈ ಧರ್ಮದ ಪ್ರಕಾರ ಅರಿವನ್ನುಂಟುಮಾಡುವವರೆಲ್ಲ ಗುರುಗಳೇ. ಈ ಧರ್ಮದಲ್ಲಿನ ಗುರು-ಶಿಷ್ಯ ಸಂಬಂಧ ಲೋಕಕ್ಕೇ ಮಾದರಿಯಾಗಿದೆ. "ಅಜಕೋಟಿ ಕಲ್ಪವರುಷದವರೆಲ್ಲರು ಹಿರಿಯರೆ?" ಎಂದು ಚೆನ್ನಬಸವಣ್ಣನವರು ಪ್ರಶ್ನಿಸಿದ್ದಾರೆ. ಅರಿವುಳ್ಳವರೇ ಹಿರಿಯರು ಎಂದು ಸೂಚಿಸಿದ್ದಾರೆ. "ಗುರು ಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನೆ; ಹಿಂದ ಬಿಟ್ಟು ಮುಂದ ಹಿಡಿಯಲೇ ಬೇಕು. ಕೂಡಲಸಂಗಮದೇವ ಕೇಳಯ್ಯಾ, ಕಿಚ್ಚಿನೊಳಗೆ ಕೋಲ ಬಯ್ಚಿಟ್ಟಂತಿರಬೇಕು" ಎಂದು ಬಸವಣ್ಣನವರು ಹೇಳಿದ್ದಾರೆ. ಎರಡು ಕೋಲುಗಳನ್ನು ಕಿಚ್ಚಿನಲ್ಲಿ ಇಟ್ಟಾಗ ಅವು ನಿಗಿನಿಗಿಯಾಗಿ ಒಂದೇ ಆಗಿರುತ್ತವೆ. ಜ್ಯೋತಿ ಮುಟ್ಟಿ ಜ್ಯೋತಿಯಾದಾಗ ಎರಡೂ ಒಂದೇ ತೆರನಾದ ಪ್ರಕಾಶವನ್ನೇ ಕೊಡುತ್ತವೆ.

## ಲಿಂಗವಂತ ಧರ್ಮದಲ್ಲಿ ಪೂಜಾರ್ಹ ವಸ್ತು ಯಾವುದು?

ಲಿಂಗವಂತ ಧರ್ಮದಲ್ಲಿ ಇಷ್ಟಲಿಂಗ ಮಾತ್ರ ಪೂಜಾರ್ಹ ವಸ್ತು. ಇಷ್ಟಲಿಂಗವು ಅರಿವಿನ ಕುರುಹು ಆಗಿದೆ. "ಅರಿಯದ ಕಾರಣ ಕುರುಹುವಿಡಿವೆನಲ್ಲದೆ ಅರಿದ ಬಳಿಕ

ಇನ್ನೇನೊ?" ಎಂದು ಅಲ್ಲಮಪ್ರಭುಗಳು ಪ್ರಶ್ನಿಸುತ್ತಾರೆ. ಇಷ್ಟಲಿಂಗವೇ ದೇವರಲ್ಲ. ಲಿಂಗದೇವನ ಕುರುಹು. ಲಿಂಗವಂತ ಧರ್ಮದಲ್ಲಿ ದೇವರ ಹೆಸರು ಲಿಂಗದೇವ ಎಂದಿದೆ. ಶರಣರು ಶಿವ ಮುಂತಾದ ಶಬ್ದಗಳನ್ನು ಕೇವಲ ರೂಢಿಗತವಾಗಿ ಬಳಸಿದ್ದಾರೆ. ಇದರ ಅರ್ಥ ಕೂಡಲಸಂಗಮದೇವ ವಚನಾಂಕಿತವನ್ನು ಲಿಂಗದೇವ ಎಂದು ತಿದ್ದಬೇಕು ಎಂದಲ್ಲ. ಆ ಕೂಡಲಸಂಗಮದೇವ ವಚನಾಂಕಿತವು ಬಸವಣ್ಣನವರ ಸಿಗ್ನೆಚರ್ ಆಗಿದೆ ಎಂಬುದನ್ನು ಮರೆಯಬಾರದು. ಕೂಡಲಸಂಗಮದೇವನಿಗೆ ಎಲ್ಲಿಯೂ ಗುಡಿ ಇಲ್ಲ. ಕೂಡಲಸಂಗಮದಲ್ಲಿರುವುದು ಸಂಗಮೇಶ್ವರ/ಸಂಗಮನಾಥ ದೇವಸ್ಥಾನವೇ ಹೊರತು ಕೂಡಲಸಂಗಮ ದೇವಸ್ಥಾನವಲ್ಲ. "ತೋರಲಿಲ್ಲದ ಸಿಂಹಾಸನದ ಮೇಲೆ ಹೇಳಬಾರದ ಘನವು ಬಂದೆರಗಿದಡೆ ತೋರಿ ಮೆರೆವ ಸಂಗಮನಾಥನು ಎದ್ದು ಹೋದನು" ಎಂದು ಬಸವಣ್ಣನವರು ಕೂಡಲಸಂಗಮದಲ್ಲಿನ ಸ್ಥಾವರಲಿಂಗವನ್ನು ಅಲ್ಲಗಳೆದಿದ್ದಾರೆ.

ಶರಣರು ತಮ್ಮೊಳಗಿನ ಲಿಂಗದೇವನ ಅನುಸಂಧಾನಕ್ಕಾಗಿ ಇಷ್ಟಲಿಂಗವೆಂಬ ಮಾಧ್ಯಮವನ್ನು ಬಳಸಿದರು. ಆ ಮೂಲಕ ತಮ್ಮೊಳಗೇ ಇರುವ ಮಹಾಘನದ ಜೊತೆ ಒಂದಾದರು. ಹೀಗೆ ಒಂದಾಗುವುದೇ ಇಷ್ಟಲಿಂಗಯೋಗ (ಶಿವಯೋಗ). ಆದ್ದರಿಂದ ಲಿಂಗವಂತ ಧರ್ಮದಲ್ಲಿ ಪೂಜೆ ಇಲ್ಲ. ಆದರೆ ಪೂಜೆ ಮಾಡಿಕೊಳ್ಳುವುದು ಇದೆ. ಪೂಜೆ ಮಾಡಿಕೊಳ್ಳುವುದೆಂದರೆ ತಮ್ಮೊಳಗಿನ ಘನದ ಜೊತೆ ಶೂನ್ಯ (ಪೂಜಿ) ಆಗುವುದು. ಹೀಗೆ ಶರಣರು ತಮ್ಮನ್ನು ತಾವು ಶೂನ್ಯ ಮಾಡಿಕೊಳ್ಳುತ್ತಿದ್ದರು. ಲಿಂಗವಂತ ಜ್ಞಾನಿಗಳು 'ಪೂಜೆ ಮಾಡಿರಿ' ಎಂದು ಹೇಳುವುದಿಲ್ಲ. 'ಪೂಜೆ ಮಾಡಿಕೊಳ್ಳಿರಿ' ಎಂದು ಹೇಳುತ್ತಾರೆ.

ದೇವರು ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ ಎಂದು ಬಸವಣ್ಣನವರು ಹೇಳಿದ್ದಾರೆ. ರೂಪಿಲ್ಲದ ವಿಶ್ವಚೇತನವಾಗಿರುವ ಇಷ್ಟಲಿಂಗವು ಲಿಂಗದೇವ ಎಂಬ ಅರಿವಿನ ಕುರುಹು ಹೊರತಾಗಿ ಮೂರ್ತಿ ಅಲ್ಲ. ಆದ್ದರಿಂದ ಲಿಂಗವಂತ ಧರ್ಮದಲ್ಲಿ ಮೂರ್ತಿಪೂಜೆ ನಿಷಿದ್ಧ. ಮೂರ್ತಿಯೇ ಇಲ್ಲವೆಂದಮೇಲೆ ಮಂದಿರದ ಪ್ರಶ್ನೆಯೇ ಇಲ್ಲ. ದೇಹವೇ ದೇಗುಲವಾಗಿರುವುದರಿಂದ ದೇವರು ನಮ್ಮೊಳಗೇ ಇದ್ದಾನೆ. ನಾವೆಲ್ಲ ಜೀವಂತ ಮಂದಿರಗಳೇ ಆಗಿದ್ದೇವೆ.

ಸಮಷ್ಟಿಯನ್ನು ವ್ಯಷ್ಟಿಯಲ್ಲಿ ಒಂದಾಗಿಸಿ ಲೋಕಕಲ್ಯಾಣದಲ್ಲಿ ತೊಡಗುವುದೇ ಲಿಂಗವಂತನು ದೇವರನ್ನು ಮೆಚ್ಚಿಸುವ ಕ್ರಮ. ಲಿಂಗಾಯತ ಎಂದರೆ 'ಲಿಂಗಧಾರಣೆ ಮಾಡಿದವನು' ಎಂಬುದು ಸಾಮಾನ್ಯ ಅರ್ಥವಾದರೆ. 'ಲಿಂಗಕ್ಕೆ ಪ್ರಿಯನಾದವನು'

ಎಂಬುದು ಅದರ ತಾತ್ತ್ವಿಕ ಅರ್ಥವಾಗಿದೆ. (ಆಯತ ಎಂದರೆ ಪ್ರಿಯ ಎಂಬ ಅರ್ಥವೂ ಇದೆ.)

ಈ ಧರ್ಮದಲ್ಲಿ ಬಸವಾದಿ ಶರಣರು ಗೌರವಾರ್ಹವಾಗಿದ್ದಾರೆ. ಬಸವಾದಿ ಶರಣರ ಪಾದಸ್ಪರ್ಶದಿಂದಾಗಿ ಬಾಗೇವಾಡಿ, ಕೂಡಲಸಂಗಮ, ಕಲ್ಯಾಣ ಮುಂತಾದವು ಸ್ಫೂರ್ತಿಯ ತಾಣಗಳಾಗಿವೆ. ಶರಣರಿಗೆ ಇಡೀ ಭೂಲೋಕವೇ ಶ್ರದ್ಧಾ ಕೇಂದ್ರವಾಗಿದೆ. ಏಕೆಂದರೆ ಇದು ಕರ್ತಾರನ ಕಮ್ಮಟವಾಗಿದೆ.

**ಲಿಂಗವಂತರು ಪೂಜೆಗಾಗಿ ತೆಂಗು, ಲಿಂಬೆಹಣ್ಣು, ಬೂದುಗುಂಬಳ ಬಳಸುವುದು ಸರಿಯೆ?**

ಅದು ಹೇಗೆ ಸರಿಯಾಗುತ್ತದೆ? ಬಲಿಪ್ರಜ್ಞೆಯ ಶಾಖಾಹಾರಿಗಳು ಇವುಗಳನ್ನು ಬಲಿಯ ವಸ್ತುಗಳನ್ನಾಗಿ ಪರಿವರ್ತಿಸಿದ್ದಾರೆ. ನಮ್ಮ ದೇಶದಲ್ಲಿ ನರಬಲಿ, ಪ್ರಾಣಿಬಲಿ ಮತ್ತು ಪಕ್ಷಿಬಲಿ ಇರುವಂತೆಯೆ ಇಂಥ ಕಾಯಿಗಳನ್ನು ಮತ್ತು ಹಿಟ್ಟಿನ ಮೂರ್ತಿಗಳನ್ನು ಕೂಡ ಬಲಿ ಕೊಡಲು ಬಳಸುತ್ತಾರೆ. ದೇವರ ಮುಂದೆ ಕಾಯಿಗಳನ್ನು ಒಡೆಯುವುದು ಬಲಿ ಸಂಪ್ರದಾಯ ಎಂಬುದನ್ನು ಜನ ಮರೆತಿದ್ದರೂ ಅದು ಸುಪ್ತಪ್ರಜ್ಞೆಯಲ್ಲಿ ಹಾಗೇ ಉಳಿದುಕೊಂಡು ಬಂದಿದೆ. ಬಸವಣ್ಣನವರು ಇಂಥ ಬಲಿಯನ್ನೂ ನಿಷೇಧಿಸಿದ್ದರು. ಬಸವಣ್ಣನವರು ಸೃಷ್ಟಿಸಿದ ಇಷ್ಟಲಿಂಗ ಪೂಜೆಯಲ್ಲಿ ತೆಂಗಿನಕಾಯಿ, ಲಿಂಬೆಕಾಯಿ ಮತ್ತು ಕುಂಬಳಕಾಯಿ ಅಥವಾ ಹಿಟ್ಟಿನ ಮೂರ್ತಿಗಳ ಬಳಕೆಯಾಗುವುದಿಲ್ಲ. ಇಷ್ಟಲಿಂಗಕ್ಕೆ ಯಾರೂ ಹರಕೆ ಹೊರುವುದಿಲ್ಲ. ಬೆಳ್ಳಿಯ ತೊಟ್ಟಿಲು, ಬಂಗಾರದ ಬಟ್ಟಲು, ವಜ್ರದ ಕಣ್ಣುಗಳು ಅದಕ್ಕೆ ಬೇಕಿಲ್ಲ. ಯಾವುದೇ ಖರ್ಚಿಲ್ಲದ ಪೂಜಾ ವಿಧಾನ ಅದು! ಉಳಿದ ಪೂಜೆಗಳು ಬಡವರ ಆರ್ಥಿಕ ವ್ಯವಸ್ಥೆಯನ್ನೇ ಹದಗೆಡಿಸಿವೆ.

**ಲಿಂಗವಂತ ಧರ್ಮದಲ್ಲಿ ಸ್ವಾಮಿಗಳು ಇದ್ದಾರೆಯೆ? ಮಠಗಳು ಇವೆಯೆ?**

"ಸ್ವಾಮಿ ನೀನು ಶಾಶ್ವತ ನೀನು" ಎಂದು ಬಸವಣ್ಣನವರು ಹೇಳುತ್ತಾರೆ. ಅರಿವೇ ಗುರು, ಗುರುವೇ ದೇವರು, ದೇವರೇ ಸ್ವಾಮಿ, ಆ ಸ್ವಾಮಿಯೇ ಶಾಶ್ವತ. ಉಳಿದೆಲ್ಲವೂ ಕಾಲಮಿತಿಯೊಂದಿಗೆ ಅಸ್ತಿತ್ವದಲ್ಲಿರುವಂಥವು. ದೇವರನ್ನು ಬಿಟ್ಟು ಸೂರ್ಯ ಚಂದ್ರ ಮೊದಲುಮಾಡಿ ಸಕಲವೂ ಮರಣಕ್ಕೆ ಒಳಗಾಗುವಂಥವು. ಆದ್ದರಿಂದ ಲಿಂಗವಂತ ಧರ್ಮದಲ್ಲಿ ಸ್ವಾಮಿಗಳಿಲ್ಲ. ಆದರೆ ತತ್ತ್ವಜಂಗಮರು ಇದ್ದಾರೆ. ಅವರು ಲಿಂಗವಂತ ಧರ್ಮದ ತತ್ತ್ವವನ್ನು ಜನಮನಗಳಲ್ಲಿ ಬಿತ್ತುವವರು.

ಲಿಂಗವಂತ ಧರ್ಮದಲ್ಲಿ ಮಠಗಳಿಲ್ಲ. ಅವುಗಳಿಗೆ ಪರ್ಯಾಯವಾಗಿ ಮಹಾಮನೆ ಇದೆ. ಈ ಮಹಾಮನೆಯ ಪರಿಕಲ್ಪನೆಯು ಸಕಲಜೀವಾತ್ಮರಿಗೆ ಲೇಸನೆ ಬಯಸು ವಂಥದ್ದಾಗಿದೆ. ಲಿಂಗವಂತ ಧರ್ಮದ ಗುರಿ ಲೋಕಕಲ್ಯಾಣವಾಗಿದೆ. ಅಂತೆಯೆ ಇಲ್ಲಿ ಜಂಗಮಕ್ಕೆ ಬಹಳ ಮಹತ್ವವಿದೆ. ಜಂಗಮಕ್ಕೆ ಅನೇಕ ಅರ್ಥಗಳಿವೆ. ಲೋಕ, ಸಮಾಜ, ವಚನಗಳಲ್ಲಿನ ಲಿಂಗತತ್ತ್ವ ಪ್ರತಿಪಾದಕ, ಚೈತನ್ಯ ಮುಂತಾದ ಅರ್ಥಗಳನ್ನು ಅದು ಹೊಂದಿದೆ.

ಶರಣರ ಮೂಲ ಉದ್ದೇಶ ಈ ಬದುಕನ್ನು ಹಸನುಗೊಳಿಸುವಂಥದ್ದಾಗಿತ್ತು. ಅನುಭಾವದ ನೆಲೆಯಲ್ಲಿ ಸುಲಿಗೆ ಇಲ್ಲದ ಮತ್ತು ಸರ್ವರಿಗೂ ಘನತೆವೆತ್ತ ಬದುಕನ್ನು ಒದಗಿಸುವ ಸಮಾಜ ನಿರ್ಮಾಣವೇ ಅವರ ಗುರಿಯಾಗಿತ್ತು. ಆದ್ದರಿಂದ ಅವರ ಅನುಭಾವದ ಬದುಕು (ಸ್ಪಿರಿಚ್ಯುವಲ್ ಲೈಫ್) ಜೀವನಪ್ರೇಮದಿಂದ ಕೂಡಿದ್ದು ಸರ್ವ ಜೀವದಯಾಪಾರವಾಗಿತ್ತು.

**ಲಿಂಗವಂತ ಧರ್ಮದಲ್ಲಿ ಪಾದಪೂಜೆ ಮತ್ತು ಪಾದೋದಕ ಸೇವನೆಯ ಸಂಪ್ರದಾಯ ಇದೆಯೆ?**

ಸ್ವಾಮಿಗಳೇ ಇಲ್ಲವೆಂದಮೇಲೆ ಅವರ ಪಾದಗಳು ಎಲ್ಲಿಂದ ಬರುವವು? ಮುಂಬರುವ ದಿನಗಳಲ್ಲಿ ಸ್ವಾಮಿಗಳು ಜಾತಿಜಂಗಮತ್ವವನ್ನು ಕಳೆದುಕೊಂಡು ತತ್ತ್ವ ಜಂಗಮರಾಗಿ ಬಸವಾದಿ ಶರಣರ ತತ್ತ್ವಗಳನ್ನು ಪ್ರಚಾರ ಮಾಡುವ ಸಂದರ್ಭದಲ್ಲೂ ಪಾದಪೂಜೆ ಮತ್ತು ಪಾದೋದಕ ಸೇವನೆ ಸಲ್ಲದು. ಲಿಂಗವಂತ ಧರ್ಮದಲ್ಲಿ ಪಾದಪೂಜೆ ಎಂದರೆ ಜ್ಞಾನದ ಪೂಜೆ. ಪಾದ ಎಂಬ ಶಬ್ದಕ್ಕೆ ಕಿರಣ, ಹೊಳವು ಮತ್ತು ಜ್ಞಾನ ಎಂಬ ಅರ್ಥಗಳೂ ಇವೆ ಎಂಬುದನ್ನು ಮರೆಯ ಬಾರದು. 'ನಿಮ್ಮ ಶ್ರೀಪಾದಕ್ಕೆ ಶರಣೆಂಬೆ' ಎಂದರೆ 'ನಿಮ್ಮ ಜ್ಞಾನಸಂಪತ್ತಿಗೆ ಶರಣು' ಎಂದರ್ಥ. ಈ ಶರಣ ಧರ್ಮವು ಬಾಗಿದ ಶಿರ ಮತ್ತು ಮುಗಿದ ಕೈಗಳೊಂದಿಗೆ ಶರಣು ಶರಣಾರ್ಥಿ ಎಂದು ಗೌರವ ಸೂಚಿಸುವ ಧರ್ಮವಾಗಿದೆ. ಸರ್ವರು ಶಿವಸ್ವರೂಪಿಗಳೇ ಆಗಿರು ವುದರಿಂದ ಯಾರು ಯಾರ ಕಾಲಿಗೆ ಬೀಳುವುದು? ಎದುರಿಗೆ ಇರುವವರ ಒಳಗಿನ ಶಿವಸ್ವರೂಪಕ್ಕೆ ಒಬ್ಬರಿಗೊಬ್ಬರು ಶರಣು ಶರಣಾರ್ಥಿ ಎನ್ನುತ್ತಾರೆ. ಪಾದೋದಕ ಎಂದರೆ ಜ್ಞಾನೋದಕ. ಜ್ಞಾನವೇ ಲಿಂಗವಾದ ಕಾರಣ ಚೆನ್ನಬಸವಣ್ಣನವರು "ಪಾದೋದಕ ವೆಂಬುದು ಲಿಂಗಕ್ಕೆ ಮಜ್ಜನಕ್ಕೆರೆದುದು" ಎಂದು ಸ್ಪಷ್ಟಪಡಿಸಿದ್ದಾರೆ. ಆದರೂ ಬಹುಪಾಲು ಸ್ವಾಮಿಗಳು ಈ ಸತ್ಯವನ್ನು ಭಕ್ತರಿಗೆ ವಿವರಿಸಿ ಹೇಳುತ್ತಿಲ್ಲ.

**ಹಾಗಾದರೆ ಮಠಗಳು ಬೇಡವೆ?**

ಖಂಡಿತ ಬೇಕು. ಆದರೆ ಅವೆಲ್ಲ ಮಹಾಮನೆಗಳಾಗಿ ಪರಿವರ್ತನೆಗೊಳ್ಳಬೇಕು. ಸ್ವಾಮಿಗಳೆಲ್ಲ ಸೇರಿ ವಚನಗಳಲ್ಲಿನ ಸರ್ವಸಮತ್ವದ ಲಿಂಗತತ್ತ್ವವನ್ನು ಜನಸಮುದಾಯದ ಬದುಕಿನ ಮೂಲ ಸೆಲೆಯಾಗಿಸುವಲ್ಲಿ ಕಾರ್ಯೋನ್ಮುಖರಾಗಬೇಕು. ಎಂಜಿನಿಯರಿಂಗ್ ಮತ್ತು ವೈದ್ಯಕೀಯ ಶಿಕ್ಷಣ ಮುಂತಾದ ವೃತ್ತಿಪರ ಸಂಸ್ಥೆಗಳನ್ನು ಸ್ಥಾಪಿಸಲು ಬಂಡವಾಳ ಶಾಹಿಗಳು ತುದಿಗಾಲ ಮೇಲೆ ನಿಂತಿದ್ದಾರೆ. ಆದ್ದರಿಂದ ಸಂಪತ್ಭರಿತ ಮಠಗಳ ಸ್ವಾಮಿಗಳು ಆ ಕಡೆ ಗಮನ ಹರಿಸಬೇಕಿಲ್ಲ. ಇಂದು ಜನಸಮುದಾಯಕ್ಕೆ ಬೇಕಿರುವುದು ಅನುಭವ ಮತ್ತು ಅನುಭಾವಪೂರ್ಣ ಬದುಕಿನ ಶಿಕ್ಷಣ. ಶರಣರ ವಚನಗಳು ಅಂಥ ಶಿಕ್ಷಣದ ಆಗರವಾಗಿವೆ. ಈ ಜೀವಪರ ಶಿಕ್ಷಣ ಪಡೆಯದೆ ಬದುಕುವುದು ಪ್ರಾಣಿಸದೃಶವಾಗುತ್ತದೆ. ಧನಾಢ್ಯರು ಮಾಡಲು ಮುಂದೆ ಬರದ ಈ ಮಹಾಕಾರ್ಯವನ್ನು ಸ್ವಾಮಿಗಳು ತತ್ತ್ವಜಂಗಮರಾಗಿ ಮಾಡಬೇಕು.

**ಲಿಂಗವಂತ ಧರ್ಮದಲ್ಲಿ ಸ್ವರ್ಗ, ನರಕ, ಪುಣ್ಯ, ಪಾಪ, ಪುನರ್ಜನ್ಮ, ಮೋಕ್ಷ ಇವೆಯೆ?**

ಇವೆಲ್ಲವುಗಳ ತಾಯಿಬೇರು ಕರ್ಮಸಿದ್ಧಾಂತ. ಕರ್ಮಸಿದ್ಧಾಂತದ ಪುಷ್ಪಗಳಿವು. ಬಸವಣ್ಣನವರು ಕರ್ಮಸಿದ್ಧಾಂತವನ್ನೇ ಕೊಚ್ಚಿಹಾಕಿ 'ಕರ್ಮಹರ ಬಸವ' ಎನಿಸಿದ್ದಾರೆ. "ಮನೆಯೊಳಗೆ ಕತ್ತಲೆ ಹರಿಯದೊಡಾ ಜ್ಯೋತಿಯದೇಕೊ? ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ ಕರ್ಮ ಹರಿಯದೊಡಾ ಪೂಜೆಯದೇಕೊ?" ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ. ಈ ಧರ್ಮದಲ್ಲಿ ಆಚಾರವೇ ಸ್ವರ್ಗ, ಅನಾಚಾರವೇ ನರಕ, ಸ್ವರ್ಗದ ಆಸೆ ಮತ್ತು ನರಕದ ಭಯ ಹುಟ್ಟಿಸುವ ಪುಣ್ಯ ಪಾಪಗಳಿಗೆ ಇಲ್ಲಿ ಸ್ಥಾನವಿಲ್ಲ. "ಪುಣ್ಯ ಪಾಪವೆಂಬ ಉಭಯಕರ್ಮವನಾರು ಬಲ್ಲರಯ್ಯಾ? ಇವನಾರುಂಬರು? ಕಾಯ ತಾನುಂಬಡೆ ಕಾಯ ತಾ ಮಣ್ಣು. ಜೀವ ತಾನುಂಬಡೆ ಜೀವ ತಾ ಬಯಲು." ಎಂದು ಹೇಳುವ ಮೂಲಕ ಪುಣ್ಯ ಪಾಪಗಳ ಜೊತೆ ಪುನರ್ಜನ್ಮ ಮತ್ತು ಮೋಕ್ಷವನ್ನೂ ಹೊಡೆದು ಹಾಕಿದ್ದಾರೆ.

ಲಿಂಗವಂತ ಧರ್ಮದಲ್ಲಿ ಇಷ್ಟಲಿಂಗ ದೀಕ್ಷೆಯೆ ಪುನರ್ಜನ್ಮ. "ಕೂಡಲಸಂಗನ ಶರಣರು ಅಚ್ಚ ಲಿಂಗೈಕ್ಯರು" ಎಂದು ಬಸವಣ್ಣನವರು ಹೇಳುತ್ತಾರೆ. ಅಂದರೆ ಶರಣರು ಬದುಕಿರುವಾಗಲೇ ಮೋಕ್ಷ ಸಾಧನೆ ಮಾಡಿದವರು. ಆದ್ದರಿಂದ ಲಿಂಗವಂತ ಧರ್ಮದಲ್ಲಿ ಅದಮ್ಯ ಜೀವನಪ್ರೀತಿಯಿಂದ ಕೂಡಿದ ದಯಾಭಾವ ಬಿಟ್ಟರೆ ಬೇರೇನೂ

ಇಲ್ಲ. ಅದುವೇ ಸಕಲಜೀವಾತ್ಮರ ಕೂಡ ದೇವರ ಜೊತೆ ಒಂದಾಗಿಸುವಂಥ ಮಾರ್ಗ.

**ಲಿಂಗವಂತರು ಪಂಚಾಂಗವನ್ನು ನಂಬಬೇಕೆ?**

ಲಿಂಗವಂತ ಧರ್ಮವು ಮೂಢನಂಬಿಕೆಗೆ ವಿರುದ್ಧವಾಗಿದೆ.

> "ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ,
> ಗ್ರಹಣ ಸಂಕ್ರಾಂತಿಯಿಂದ ವೆಗ್ಗಳ,
> ಏಕಾದಶಿ ವ್ಯತೀಪಾತದಿಂದ ವೆಗ್ಗಳ,
> ಸೂಕ್ಷ್ಮ ಶಿವಪಥನರಿದಂಗೆ
> ಹೋಮ, ನೇಮ, ಜಪ, ತಪದಿಂದ ವೆಗ್ಗಳ
> ಕೂಡಲಸಂಗಮದೇವಾ ನಿಮ್ಮ ಮಾಣದೆ ನೆನೆವಂಗೆ."

ಎಂದು ಬಸವಣ್ಣನವರು ಸ್ಪಷ್ಟಪಡಿಸಿದ್ದಾರೆ. ಲಿಂಗಪಥವನ್ನು ಅರಿಯುವುದು ಎಲ್ಲಕ್ಕಿಂತ ಹೆಚ್ಚಿನದಾಗಿದೆ. "ವಾರ, ತಿಥಿ, ಸುಮುಹೂರ್ತವೆಂಬ ಲೌಕಿಕದ ಕರ್ಮವ ಮಾಡಿದಡೆ ನಿಮ್ಮ ಸದ್ಭಕ್ತರಿಗೆ ದೂರವಯ್ಯಾ ಕೂಡಲಚೆನ್ನಸಂಗಮದೇವಾ" ಎಂದು ಚೆನ್ನಬಸವಣ್ಣನವರು ಹೇಳಿದ್ದಾರೆ.

**ಅಷ್ಟಾವರಣ, ಷಟ್‌ಸ್ಥಲ ಮತ್ತು ಪಂಚಾಚಾರ ಅಂದರೆ?**

ಇವು ಲಿಂಗವಂಥ ಧರ್ಮಾಚರಣೆಯ ಮೂರು ಅವಿಭಾಜ್ಯ ಅಂಗಗಳು. ಆದರೆ ಇವೆಲ್ಲ ೧೨ನೇ ಶತಮಾನದ ಮೊದಲೇ ಇದ್ದವು ಎಂದು ಪಟ್ಟಭದ್ರ ಹಿತಾಸಕ್ತಿಗಳು ಪ್ರತಿಪಾದಿಸುತ್ತಿವೆ. ಕಳೆದ ೮೫೦ ವರ್ಷಗಳ ಅವಧಿಯಲ್ಲಿ ಇಂಥ ಅನೇಕ ಅನ್ಯಾಯಗಳನ್ನು ಶರಣರ ಲಿಂಗವಂತ ಧರ್ಮದ ಮೇಲೆ ಮಾಡಲಾಗಿದೆ. ಹೀಗೆ ಹಿಂದಿನ ಗ್ರಂಥಗಳಲ್ಲಿ ಈ ವಿಚಾರಗಳನ್ನು ಪ್ರಜ್ಞಾಪೂರ್ವಕವಾಗಿ ಸೇರಿಸಿದ್ದನ್ನು ಎತ್ತಿ ತೋರಿಸುವ ಪಟ್ಟಭದ್ರ ಹಿತಾಸಕ್ತಿಗಳು 'ಬಸವಣ್ಣನವರು ಇಷ್ಟಲಿಂಗದ ಜನಕರು' ಎಂಬುದನ್ನೂ ಒಪ್ಪಿಕೊಳ್ಳುವುದಿಲ್ಲ. ಇಷ್ಟಲಿಂಗ ಕೂಡ ಮೊದಲೇ ಇತ್ತು ಎಂದು ವಾದಿಸುತ್ತಾರೆ! "ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ, ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೇ ಯೋಗ್ಯ" ಎಂದು ಹೇಳುವ ಬಸವಣ್ಣನವರು ಇಷ್ಟಲಿಂಗದ ಮೂಲಕ ಜಾತಿವ್ಯವಸ್ಥೆಗೆ ಕೊಡಲಿ ಪೆಟ್ಟು ಕೊಟ್ಟಿದ್ದಾರೆ. ಆದರೆ ಮೇಲು ಕೀಳುಗಳಲ್ಲಿ ನಂಬಿಕೆ ಇರುವ ಲಿಂಗೋದ್ಭವವಾದಿಗಳು ಬಸವಣ್ಣನವರಿಗೆ ಇಷ್ಟಲಿಂಗ

ಕೊಟ್ಟವರು ತಮ್ಮ ಆಚಾರ್ಯರೇ ಎಂದು ಸಾಧಿಸಲು ವಿಫಲ ಪ್ರಯತ್ನ ಮಾಡುತ್ತಲೇ ಇದ್ದಾರೆ.

'ಗುರು, ಲಿಂಗ, ಜಂಗಮ, ಪಾದೋದಕ (ಜ್ಞಾನೋದಕ), ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ' ಇವು ಅಷ್ಟಾವರಣಗಳು. ಐಹಿಕ ಜಗತ್ತಿನ ವಸ್ತುಮೋಹದಿಂದ ರಕ್ಷಿಸುವಂಥವು.

'ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ' ಇವು ಷಟ್‌ಸ್ಥಲಗಳು. ಲಿಂಗವಂತರ ಮಾನಸಿಕ ಮಜಲುಗಳನ್ನು ಸೂಚಿಸುತ್ತವೆ. ವ್ಯಷ್ಟಿಯಿಂದ ಸಮಷ್ಟಿಪ್ರಜ್ಞೆ ವರೆಗಿನ ವ್ಯಕ್ತಿತ್ವ ವಿಕಸನವನ್ನುಂಟು ಮಾಡುವ ಸ್ಥಲಗಳಿವು.

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ ಇವು ಪಂಚಾಚಾರಗಳು. ಇವುಗಳನ್ನು ಆಚರಣೆಯಲ್ಲಿ ತರುವುದೇ ಲಿಂಗವಂತರ ಕರ್ತವ್ಯ ವಾಗಿದೆ.

ಇಷ್ಟಲಿಂಗದಲ್ಲಿ ನಂಬಿಕೆ ಇಟ್ಟು ಏಕದೇವೋಪಾಸಕರಾಗುವುದು ಲಿಂಗಾಚಾರ. ಪರಹಿತ ಬಯಸುವುದು ಸದಾಚಾರ. ಜಾತಿಭೇದ ಮಾಡದಿರುವುದು ಶಿವಾಚಾರ. ಶಿವಭಕ್ತರ ನಿಂದೆಯನ್ನು ಸಹಿಸದಿರುವುದು ಗಣಾಚಾರ. ಶಿವಭಕ್ತರಲ್ಲಿ ಸೇವಾಭಾವದಿಂದ ಇರುವುದು ಭೃತ್ಯಾಚಾರ.

## ಲಿಂಗವಂತ ಧರ್ಮದಲ್ಲಿ ಜಾತಿಗಳಿವೆಯೆ?

ಲಿಂಗವಂತ ಧರ್ಮ ನಿರ್ಜಾತಿ ಧರ್ಮವಾಗಿದೆ. ಮನುವಾದಿಗಳ ವರ್ಣ, ಜಾತಿ ಮತ್ತು ಉಪಜಾತಿಗಳನ್ನು ನಿರ್ನಾಮ ಮಾಡುವ ಉದ್ದೇಶದಿಂದಲೇ ಈ ಧರ್ಮ ಜನ್ಮತಾಳಿದೆ. ದುರಂತವೆಂದರೆ ಈ ಧರ್ಮ ಕಾಲಾನುಕ್ರಮದಲ್ಲಿ ಉಪಜಾತಿ ಗಳಿಂದ ತುಂಬಿಹೋಗಿದೆ. ಲಿಂಗಾಯತರು ಯಾವಾಗ ಹಿಂದೂ-ಲಿಂಗಾಯತರಾದರೊ ಆವಾಗಲೇ ಅವರು ತಮ್ಮ ಸ್ವತಂತ್ರ ಧರ್ಮವನ್ನು ಕಳೆದುಕೊಂಡು ಹಿಂದೂ ಧರ್ಮದೊಳಗಿನ ಲಿಂಗಾಯತ ಜಾತಿಯಾದರು. ಈ ದುರಂತ ಎಲ್ಲಿಯವರೆಗೆ ಮುಂದುವರಿಯಿತೆಂದರೆ ಜಾತಿಗಳಿಲ್ಲದ ಲಿಂಗಾಯತ ಧರ್ಮಕ್ಕೆ ಸಂಬಂಧಿಸಿದ ಕಾಯಕಗಳು ಉಪಜಾತಿಗಳಾಗಿ ರೂಪುಗೊಂಡವು. ಸ್ವತಂತ್ರ ಲಿಂಗವಂತ ಧರ್ಮದಲ್ಲಿ ಸಮಗಾರ ಹರಳಯ್ಯನವರು ಎಂದರೆ ಸಮಗಾರ ಕಾಯಕದ ಲಿಂಗವಂತ ಹರಳಯ್ಯ ನವರು. ಆದರೆ ಲಿಂಗಾಯತವು ಹಿಂದೂ ಧರ್ಮದ ಭಾಗವಾದಾಗ ಸಮಗಾರ

ಎಂಬುದು ಜಾತಿಯಾಯಿತು. ಹೀಗೆ ಲಿಂಗಾಯತ ಜಾತಿಯಾದ ನಂತರ ಜಂಗಮ, ಆರಾಧ್ಯ, ಬಣಜಿಗ, ಪಂಚಮಸಾಲಿ, ಕುಡು ಒಕ್ಕಲಿಗ, ಸಾದರ, ನೊಣಬ, ನಗರ್ತ, ಗೌಡಲಿಂಗಾಯತ, ಲಿಂಗಾಯತ ರೆಡ್ಡಿ, ಕುರುಹಿನಶೆಟ್ಟಿ, ಗಾಣಿಗ, ಬಣಗಾರ, ನೇಕಾರ, ಶಿವಸಿಂಪಿ, ಶೀಲವಂತ, ಹೂಗಾರ ಮುಂತಾದ ಉಪಜಾತಿಗಳು ಹುಟ್ಟಿಕೊಂಡಾಗ ಕಾಯಕದ ಪ್ರಾಮುಖ್ಯ ಹೊರಟುಹೋಯಿತು.

ಮೈಸೂರು ರಾಜ್ಯದ ೧೮೯೧ನೇ ಜನಗಣತಿಯ ಪ್ರಕಾರ ಲಿಂಗಾಯತದಲ್ಲಿ ೩೮ ಉಪಜಾತಿಗಳಿವೆ. ೧೯೦೧ರ ಬಾಂಬೆ-ಕರ್ನಾಟಕದ ಜನಗಣತಿಯ ಪ್ರಕಾರ ೪೩ ಉಪಜಾತಿಗಳಿವೆ.

ಲಿಂಗಾಯತರು ತಮ್ಮ ಸ್ವತಂತ್ರ ಧರ್ಮವನ್ನು ಮರೆತು ಉಪಜಾತಿಗಳಲ್ಲಿ ಒಡೆದು ಹೋದಾಗ ಸಹಜವಾಗಿಯೆ ಅವರ ತಲೆಯಲ್ಲಿ ಮನು ವಾಸ ಮಾಡುವನು. ಆಗ ಬಸವಣ್ಣ ನಾಲಿಗೆಯ ಮೇಲೆ ಮಾತ್ರ ಇರುತ್ತಾರೆ. ಲಿಂಗವಂತ ಧರ್ಮ ಉಳಿಯಬೇಕಾದರೆ ಲಿಂಗಾಯತರು ಜಾತಿಗಳನ್ನು ನಿರ್ನಾಮ ಮಾಡುವುದು ಅವಶ್ಯವಾಗಿದೆ. ಇಷ್ಟಲಿಂಗ ಪೂಜಕರು ವಿವಿಧ ಉಪಜಾತಿಗಳ ಮಧ್ಯದ ಬೇಲಿಗಳನ್ನು ಕಿತ್ತೆಸೆಯಬೇಕು. ಉಪಜಾತಿಗಳ ಮಧ್ಯೆ ಯುದ್ಧೋಪಾದಿಯಲ್ಲಿ ರಕ್ತಸಂಬಂಧ ಸಾಧಿಸುವುದರ ಮೂಲಕ ಲಿಂಗಾಯತ ಒಂದು ಸ್ವತಂತ್ರ ಧರ್ಮ ಎಂಬ ಸತ್ಯವನ್ನು ಜಗತ್ತಿಗೆ ಸಾರುತ್ತ ಯಶಸ್ಸನ್ನು ಸಾಧಿಸಿದಾಗ ಮಾತ್ರ ಬಸವಾದಿ ಶರಣರು ಸ್ಥಾಪಿಸಿದ ಲಿಂಗವಂತ ಧರ್ಮ ಉಳಿಯಲು ಸಾಧ್ಯ. ಇಲ್ಲದಿದ್ದರೆ ಜಾತೀಯತೆ ಮತ್ತು ಅಸ್ಪೃಶ್ಯತೆಯನ್ನು ಆಚರಿಸುವುದರೊಂದಿಗೆ ಹೋಮ ಹವನಗಳಿಗೆ ಬಲಿಯಾಗುತ್ತ ಗುಡಿ ಗುಡಿ ಸುತ್ತುವ ಸೋ ಕಾಲ್ಡ್ ಲಿಂಗಾಯತರನ್ನೇ ನೋಡುವ ದುರಂತ ಸ್ಥಿತಿಯನ್ನು ತಲುಪಬೇಕಾಗುತ್ತದೆ.

**ಲಿಂಗವಂತ ಧರ್ಮ ರಕ್ಷಣೆಗಾಗಿ ಅನುಯಾಯಿಗಳು ಏನು ಮಾಡಬೇಕು?**

ಲಿಂಗವಂತ ಧರ್ಮವು ಸರಳ ಸಹಜ ಧರ್ಮವಾಗಿದೆ.

೧ ಬಹುದೇವೋಪಾಸನೆಯಿಂದ ಏಕದೇವೋಪಾಸನೆ ಕಡೆಗೆ
೨) ಸ್ಥಾವರಲಿಂಗದಿಂದ ಇಷ್ಟಲಿಂಗದ ಕಡೆಗೆ
೩) ಮಂದಿರದಿಂದ ಅನುಭವಮಂಟಪದ ಕಡೆಗೆ
೪) ಮಠಗಳಿಂದ ಮಹಾಮನೆಯ ಕಡೆಗೆ
೫) ಜಾತಿಯಿಂದ ನೀತಿಯ ಕಡೆಗೆ

೭)　ಕರ್ಮಸಿದ್ಧಾಂತದಿಂದ ಕಾಯಕಸಿದ್ಧಾಂತದ ಕಡೆಗೆ.
೮)　ದಾನದಿಂದ ದಾಸೋಹದ ಕಡೆಗೆ
೮)　ಮೂಢನಂಬಿಕೆಯಿಂದ ವೈಚಾರಿಕತೆಯ ಕಡೆಗೆ
೯)　ವ್ಯಷ್ಟಿಪ್ರಜ್ಞೆಯಿಂದ ಸಮಷ್ಟಿಪ್ರಜ್ಞೆಯ ಕಡೆಗೆ
೧೦) ವ್ಯಕ್ತಿಪ್ರಭುತ್ವದಿಂದ ಪ್ರಜಾಪ್ರಭುತ್ವದ ಕಡೆಗೆ
೧೧) ಹೆಂಡಿರು ಮಕ್ಕಳುಳ್ಳ ಸಾಕಾರ ಶಿವಮೂರ್ತಿಯಿಂದ ನಿರಾಕಾರ ಶಿವನೆಡೆಗೆ
೧೨) ಪುರುಷಪ್ರಧಾನ ಸಮಾಜದಿಂದ ಲಿಂಗಭೇದವಿಲ್ಲದ ಸಮಾಜದೆಡೆಗೆ
೧೩) ಅಸಮಾನತೆಯ ಸಮಾಜದಿಂದ ಸಮಾನತೆಯ ಸಮಾಜದೆಡೆಗೆ
೧೪) ಭ್ರಮಾತ್ಮಕ ಬದುಕಿನಿಂದ ವಾಸ್ತವದ ಬದುಕಿನೆಡೆಗೆ
೧೫) ಹಿಂಸೆಯಿಂದ ಅಹಿಂಸೆಯ ಕಡೆಗೆ

ಈ ೧೫ ಅಂಶಗಳನ್ನು ತನ್ನ ಅರಿವಿನಲ್ಲಿ ಅಳವಡಿಸಿಕೊಂಡು ಕಾಯಕ, ಪ್ರಸಾದ ಮತ್ತು ದಾಸೋಹಂಭಾವದಿಂದ ಸ್ವಾವಲಂಬಿ ಬದುಕನ್ನು ಸಾಗಿಸುವವನೇ ಲಿಂಗಾಂಗ ಸಾಮರಸ್ಯದ ಆನಂದವನ್ನು ಪಡೆಯುವ ಲೋಕೋಪಯೋಗಿ ಲಿಂಗವಂತನಾಗುತ್ತಾನೆ.

**ಲಿಂಗವಂತ ಧರ್ಮಸ್ಥಾಪಕರಾರು?**

ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಚೆನ್ನಬಸವಣ್ಣ, ಸಿದ್ಧರಾಮೇಶ್ವರ, ಅಕ್ಕ ನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆ, ಮಾದಾರ ಚೆನ್ನಯ್ಯ, ಸಮಗಾರ ಹರಳಯ್ಯ, ಮಧುವರಸ, ಡೋಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ, ನುಲಿಯ ಚಂದಯ್ಯ, ಕಿನ್ನರಿ ಬ್ರಹ್ಮಯ್ಯ, ಬಹರೂಪಿ ಚೌಡಯ್ಯ, ಒಕ್ಕಲಿಗ ಮುದ್ದಣ್ಣ, ಮಾದಾರ ಧೂಳಯ್ಯ, ಸಂಬೋಳಿ ನಾಗಿದೇವ, ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ಸೂಳೆ ಸಂಕವ್ವೆ, ಕುಂಬಾರ ಗುಂಡಯ್ಯ, ಕೇತಲದೇವಿ, ಉರಿಲಿಂಗಪೆದ್ದಿ, ಕಾಳವ್ವೆ, ಗಜೇಶ ಮಸಣಯ್ಯ, ತುರುಗಾಹಿ ರಾಮಣ್ಣ, ಸತ್ಯಕ್ಕ, ಲದ್ದೆಯ ಸೋಮಣ್ಣ, ಅಕ್ಕಮ್ಮ, ಹಡಪದ ಅಪ್ಪಣ್ಣ, ಲಿಂಗಮ್ಮ, ಮೋಳಿಗೆ ಮಾರಯ್ಯ, ಮೋಳಿಗೆ ಮಹಾದೇವಿ, ಬೊಂತಾದೇವಿ, ಹೆಂಡದ ಮಾರಯ್ಯ, ವೀರಗೊಲ್ಲಾಳ, ಹಾವಿನಾಳ ಕಲ್ಲಯ್ಯ, ಕೋಲ ಶಾಂತಯ್ಯ, ಶಾಂತರಸ, ಸೊಡ್ಡಳ ಬಾಚರಸ, ಅಮುಗೆ ರಾಯಮ್ಮ, ಅಮುಗಿ ದೇವಯ್ಯ, ಕೂಗಿನ ಮಾರಯ್ಯ, ಕೀಲಾರದ ಭೀಮಣ್ಣ, ಎಚ್ಚರಿಕೆ ಕಾಯಕದ ಮುಕ್ತಿನಾಥಯ್ಯ, ವೈದ್ಯ ಸಂಗಣ್ಣ, ಗಾಣದ ಕಣ್ಣಪ್ಪ, ಜೇಡರ ದಾಸಿಮಯ್ಯ, ದುಗ್ಗಳೆ ಮುಂತಾದ ೭೭೦ ಅಮರಗಣಂಗಳು ಲಿಂಗವಂತ ಧರ್ಮದ ಸ್ಥಾಪಕರಾಗಿದ್ದಾರೆ.

**ಲಿಂಗವಂತರ ಧರ್ಮಗುರು ಯಾರು?**

ಬಸವಣ್ಣನವರು ಲಿಂಗವಂತರ ಧರ್ಮಗುರು. ಅಂತೆಯೆ ಸಿದ್ಧರಾಮೇಶ್ವರರು "ಮಹಾಜ್ಞಾನ ಮಹಾಪ್ರಕಾಶ ಬಸವಣ್ಣನ ಧರ್ಮವಯ್ಯಾ ಕಪಿಲಸಿದ್ಧಮಲ್ಲಿನಾಥಯ್ಯಾ" ಎಂದು ತಿಳಿಸಿದ್ದಾರೆ.

**ಲಿಂಗವಂತರ ಧರ್ಮಗ್ರಂಥ ಯಾವುದು?**

೧೨ನೇ ಶತಮಾನದ ಅಮರಗಣಂಗಳ ಸಮಗ್ರ ವಚನಗಳೇ ಲಿಂಗವಂತರ ಧರ್ಮಗ್ರಂಥ.



# ೨೧ನೇ ಶತಮಾನಕ್ಕೆ ಬಸವಧರ್ಮ

ಲಿಂಗಭೇದ, ವರ್ಣಭೇದ ಮತ್ತು ವರ್ಗಭೇದಗಳು ೨೧ನೇ ಶತಮಾನಕ್ಕೆ ಭಾರಿ ದೊಡ್ಡ ಸವಾಲುಗಳಾಗಿ ನಿಂತಿವೆ. ಈ ಭೇದಗಳಲ್ಲದೆ ಭಯೋತ್ಪಾದನೆ, ಜನಾಂಗ ಹತ್ಯೆ, ಯುದ್ಧ, ನಿರುದ್ಯೋಗ, ಆರ್ಥಿಕ ಹಿಂಜರಿತ, ಕೊಲೆ, ಸುಲಿಗೆ, ಅತ್ಯಾಚಾರ, ಹಸಿವು, ಬಡತನ, ಮಾನಸಿಕ ಒತ್ತಡ ಮತ್ತು ಪರಿಸರ ಸಮಸ್ಯೆಗಳು ಇಡೀ ವಿಶ್ವವನ್ನು ಕಾಡುತ್ತಿವೆ. ಜನಾಂಗಗಳ ಮತ್ತು ದೇಶಗಳ ಮಧ್ಯೆ ಅಪನಂಬಿಕೆ ಹೆಚ್ಚುತ್ತಿದೆ. ಮಾನವೀಯತೆ, ಜೀವಕಾರುಣ್ಯ ಮತ್ತು ಎಲ್ಲ ಜನಾಂಗಗಳ ಬಗೆಗಿನ ಪ್ರೇಮಭಾವ ಕಡಿಮೆಯಾಗುತ್ತ ದ್ವೇಷ ಬೆಳೆಯುತ್ತಿದೆ. ಇಂಥ ವಿಷಮ ಪರಿಸ್ಥಿತಿಯಲ್ಲಿ ವಿಶ್ವಮಾನ್ಯವಾದ ಬಸವಣ್ಣನವರ ಚಿಂತನೆಗಳು, ಜಗತ್ತನ್ನು ಎಲ್ಲ ಅನಿಷ್ಟಗಳಿಂದ ಮುಕ್ತಗೊಳಿಸುವ ಶಕ್ತಿಯನ್ನು ಹೊಂದಿವೆ.

ಭೌತಿಕ ಜಗತ್ತಿನ ಕಾಳಜಿಯೊಂದಿಗೆ ಆಧ್ಯಾತ್ಮಿಕ ಜಗತ್ತಿನ ಕಡೆಗೆ ಸಾಗುವುದು. ಭೌತಿಕ ಜಗತ್ತಿನ ಅನುಭವದ ಮೂಲಕ ಆಧ್ಯಾತ್ಮಿಕ ಜಗತ್ತಿನ ಅನುಭಾವ ಪಡೆಯುವುದು. ಸಂಸಾರದಲ್ಲಿ ಇದ್ದುಕೊಂಡೇ ಸದ್ಗತಿಯನ್ನು ಹೊಂದುವುದು. ಸಮಾಜಸೇವೆಯ ಮೂಲಕ ದೇವರಲ್ಲಿ ನಿಷ್ಠೆಯನ್ನು ಹೊಂದುವುದು. ಎಲ್ಲ ಧರ್ಮಗಳ ಜನರ ಬಗ್ಗೆ ಮತ್ತು ಎಲ್ಲ ಪಶು ಪಕ್ಷಿ ಮುಂತಾದ ಜೀವಿಗಳ ಬಗ್ಗೆ ಕಾಳಜಿಯನ್ನು ವ್ಯಕ್ತಪಡಿಸುವುದು. ಪರಿಸರ ಸಮತೋಲನವನ್ನು ಕಾಪಾಡುವುದು. ದೇಶ, ಭಾಷೆ, ಜಾತಿ, ಧರ್ಮ ಮತ್ತು ಜನಾಂಗಗಳ ಮಧ್ಯೆ ಮಾನವೀಯ ಸಂಬಂಧಗಳನ್ನು ಬೆಳೆಸುವುದು. "ಒಬ್ಬನೇ ದೇವರು, ಒಂದೇ ವಿಶ್ವ ಮತ್ತು ಒಂದೇ ಮಾನವ ಜನಾಂಗ" ಎಂಬ ಸತ್ಯವನ್ನು ಸಾರುವುದು ಲಿಂಗವಂತ ಧರ್ಮ ಎಂಬ ಬಸವಧರ್ಮದ ಗುರಿಯಾಗಿದೆ.

ಬಸವಣ್ಣನವರು ೧೨ನೇ ಶತಮಾನದಲ್ಲೇ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿ ಹಿಡಿದರು. ಸಮಾಜೋಧಾರ್ಮಿಕ ಸಂಸತ್ತು ಎಂದು ಕರೆಯಿಸಿಕೊಳ್ಳುವ ಅನುಭವ ಮಂಟಪವನ್ನು ಸ್ಥಾಪಿಸಿದರು. ಈ ಅನುಭವ ಮಂಟಪದಲ್ಲಿ ಎಲ್ಲ ಕಾಯಕ ಜೀವಿಗಳ ೭೭೦ ಪ್ರತಿನಿಧಿಗಳಿದ್ದರು. ಕಸಗುಡಿಸುವವರ, ತೊಗಲು ಹದ ಮಾಡುವವರ, ಪಾದರಕ್ಷೆಗಳನ್ನು ಹೊಲಿಯುವವರ, ದೋಣಿ ನಡೆಸುವವರ, ಬಟ್ಟೆ ಒಗೆಯುವವರ, ಹುಲ್ಲು ಮಾರುವವರ, ರೈತರ, ನೇಕಾರರ, ಕ್ಷೌರಿಕರ, ಬಡಗಿಗಳ, ವೈದ್ಯರ, ದನ ಕಾಯುವವರ, ಕಟ್ಟಿಗೆ ಮಾರುವವರ, ಕಮ್ಮಾರರ, ಕುಂಬಾರರ, ಅಕ್ಕಸಾಲಿಗರ, ಕುರುಬರ, ಬುಟ್ಟಿ ಹೆಣೆಯುವವರ, ವಾದ್ಯಗಳನ್ನು ನುಡಿಸುವವರ, ಬೀದಿನಾಟಕ ಮಾಡುವವರ, ಸಮಾಜದ ಕಟ್ಟಕಡೆಯಲ್ಲಿದ್ದು ಕಡುಬಡತನದಲ್ಲಿ ಜೀವನ ಸಾಗಿಸುವ ದಲಿತರ... ಹೀಗೆ ಹಲವು ಹದಿನೆಂಟು ರೀತಿಯ ಕಾಯಕ ಮಾಡುವವರ ಪ್ರತಿನಿಧಿಗಳಿಂದ ಅನುಭವ ಮಂಟಪ ಕಂಗೊಳಿಸುತ್ತಿತ್ತು. ಈ ಅನುಭವ ಮಂಟಪದಲ್ಲಿ ಎಲ್ಲ ಮಹಿಳಾ ಮತ್ತು ಪುರುಷ ಪ್ರತಿನಿಧಿಗಳಿಗೆ ಸಮಾನ ಅವಕಾಶವಿತ್ತು. ಎಲ್ಲರಿಗೂ ಮಾತ ನಾಡುವ ಹಕ್ಕಿತ್ತು. ೧೨ನೇ ಶತಮಾನಕ್ಕೆ ಮೊದಲು ಇಂಥ ಒಂದು ಪ್ರಜಾಪ್ರಭುತ್ವದ ಬೃಹತ್ ಪ್ರಯೋಗ ಜಗತ್ತಿನ ಯಾವ ಮೂಲೆಯಲ್ಲೂ ನಡೆದಿಲ್ಲ ಎಂಬುದು ಗಮನಾರ್ಹವಾಗಿದೆ.

೧೨ನೇ ಶತಮಾನದಲ್ಲಿ ಕೆಳವರ್ಗದ ಜನರಿಗೆ ಮತ್ತು ಮಹಿಳೆಯರಿಗೆ ಶಿಕ್ಷಣ ಪಡೆಯುವ ಹಕ್ಕು ಇದ್ದಿದ್ದಿಲ್ಲ. ಬಸವಣ್ಣನವರು ಇಂಥ ಅಕ್ಷರ ವಂಚಿತರಿಗೆ ಅಕ್ಷರ ಜ್ಞಾನ ನೀಡಿ, ಅವರು ಕೂಡ ವಚನಗಳನ್ನು ಬರೆದು ತಮ್ಮ ವಿಚಾರಗಳನ್ನು ವ್ಯಕ್ತಪಡಿಸು ವಂಥ ವಾತಾವರಣವನ್ನು ಸೃಷ್ಟಿಸಿದರು. ಮಹಿಳೆ ಮತ್ತು ಪುರುಷರಿಗಾಗಿ ಈ ರೀತಿಯ ವಯಸ್ಕರ ಶಿಕ್ಷಣ ವ್ಯವಸ್ಥೆ ಜಗತ್ತಿನಲ್ಲಿ ಹಿಂದೆ ಎಲ್ಲಿಯೂ ಇದ್ದಿದ್ದಿಲ್ಲ.

ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಘೋಷಣೆಯಲ್ಲಿನ ಎಲ್ಲ ೩೦ ಅಂಶಗಳೂ ಬಸವಣ್ಣನವರ ವಚನಗಳಲ್ಲಿ ಇವೆ. ಆ ಮೂಲಕ ಆಧುನಿಕ ಮಾನವನ ಆಶಯಗಳನ್ನು ಈಡೇರಿಸುವ ಶಕ್ತಿಯನ್ನು ಹೊಂದಿವೆ. ಬಡವರ ಮತ್ತು ಮಹಿಳೆಯರ ಹಕ್ಕಿಗಾಗಿ ಅಷ್ಟೇ ಅಲ್ಲದೆ ಅನೈತಿಕ ಸಂಬಂಧದಿಂದ ಹುಟ್ಟಿದ ಮಗುವಿನ ಹಕ್ಕಿಗಾಗಿಯೂ ಅವರು ಧ್ವನಿ ಎತ್ತಿದ್ದಾರೆ.

ಬಸವಣ್ಣನವರಿಗೆ ಇಷ್ಟಲಿಂಗಪೂಜೆ ಎಂಬುದು ಮಾನವ ಹಕ್ಕುಗಳ ಪ್ರಜ್ಞೆಯನ್ನು ಹೊಂದುವ ಸಾಧನವಾಗಿದೆ. ಮಾನವ ಏಕತೆಯನ್ನು ಸಾಧಿಸುವ ಕ್ರಮವಾಗಿದೆ.

ಲಿಂಗವ ಪೂಜಿಸಿ ಫಲವೇನಯ್ಯಾ,
ಸಮರತಿ ಸಮಕಳೆ ಸಮಸುಖವನರಿಯದನ್ನಕ್ಕ?
ಲಿಂಗವ ಪೂಜಿಸಿ ಫಲವೇನಯ್ಯಾ,
ಕೂಡಲಸಂಗಮದೇವರ ಪೂಜಿಸಿ
ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ?

–ಬಸವಣ್ಣ

ಎಂದು ಬಸವಣ್ಣನವರು ಪ್ರಶ್ನಿಸುತ್ತಾರೆ. ೨೧ನೇ ಶತಮಾನದ ಜಗತ್ತು ಕೂಡ ಲಿಂಗಭೇದ, ವರ್ಣಭೇದ ಮತ್ತು ವರ್ಗಭೇದಗಳಿಂದ ಮುಕ್ತವಾಗಿಲ್ಲ. ಜಗತ್ತಿನ ಎಲ್ಲ ಜನಾಂಗಗಳ ಮಧ್ಯೆ ಸಾಮರಸ್ಯ ಮೂಡಿಲ್ಲ. ಈ ಎಲ್ಲ ಸಮಸ್ಯೆಗಳಿಂದಾಗಿ ಜಗತ್ತಿನ ಜನರು ಜನಾಂಗದ್ವೇಷ, ಕೊಲೆ, ಸುಲಿಗೆ ಮತ್ತು ಅಪನಂಬಿಕೆಗಳಿಗೆ ಬಲಿಯಾಗುತ್ತಲೇ ಇರುತ್ತಾರೆ. ಮಹಿಳೆಯರು ಅತ್ಯಾಚಾರಕ್ಕೆ ಒಳಗಾಗುತ್ತಲೇ ಇರುತ್ತಾರೆ. ಇಂಥ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳುವುದೇ ಇಷ್ಟಲಿಂಗ ಪೂಜೆಯ ಉದ್ದೇಶವಾಗಿದೆ. ಬರಿ ಲಿಂಗಪೂಜೆ ಮಾಡುತ್ತ ಇಂಥ ಸಮಸ್ಯೆಗಳ ಬಗ್ಗೆ ಗಮನ ಹರಿಸದಿದ್ದರೆ ಮತ್ತು ಅವುಗಳ ನಿವಾರಣೆಗಾಗಿ ಪ್ರಯತ್ನಿಸದಿದ್ದರೆ ಇಷ್ಟಲಿಂಗಪೂಜೆ ಮಾಡುವುದು ವ್ಯರ್ಥ ಎಂಬುದನ್ನು ಬಸವಣ್ಣನವರು ಸ್ಪಷ್ಟಪಡಿಸುತ್ತಾರೆ.

ಸಮರತಿ ಎಂದರೆ ಸತಿ ಮತ್ತು ಪತಿ ಸಮಾನ ಹಕ್ಕು, ಗೌರವ, ವ್ಯಕ್ತಿ ಸ್ವಾತಂತ್ರ್ಯ ಮತ್ತು ಅಭಿಪ್ರಾಯ ಸ್ವಾತಂತ್ರ್ಯವನ್ನು ಹೊಂದಿ, ಲಿಂಗಭೇದವನ್ನು ಅಳಿಸಿ, ಪರಸ್ಪರ ಕಾಳಜಿಯೊಂದಿಗೆ ಎಲ್ಲರೂ ಒಂದಾಗಿ ಬದುಕುವುದು. ಹೀಗೆ ಬಸವಣ್ಣನವರು ಲಿಂಗಭೇದ ನೀತಿಯನ್ನು ವಿರೋಧಿಸುತ್ತಾರೆ.

ಸಮಕಳೆ ಎಂದರೆ ಪ್ರತಿಯೊಬ್ಬ ಮಾನವನಿಗೂ ಸಮನಾದ ತೇಜಸ್ಸು ಇರುವುದು. ಬ್ರಾಹ್ಮಣರಿಗೆ ಬ್ರಹ್ಮತೇಜಸ್ಸು ಮತ್ತು ಕ್ಷತ್ರಿಯರಿಗೆ ಕ್ಷಾತ್ರ ತೇಜಸ್ಸು ಎಂಬುದು ಇರುವುದಿಲ್ಲ. ಕೆಳಜಾತಿಯವರಿಗೆ ಮತ್ತು ಮೇಲ್ಜಾತಿಯವರಿಗೆ ಒಂದೇ ರೀತಿಯ ಮಾನವ ತೇಜಸ್ಸು ಇರುತ್ತದೆ. ಎಲ್ಲ ಮಾನವರು ಸಮಾನರಾಗಿದ್ದಾರೆ. ಜಾತಿ. ಕುಲ ಮತ್ತು ಧರ್ಮಗಳಿಂದ ಯಾರೂ ಮೇಲು ಮತ್ತು ಕೀಳು ಆಗುವುದಿಲ್ಲ. ಹೀಗೆ ಬಸವಣ್ಣನವರು ವರ್ಣಭೇದ ನೀತಿಯನ್ನು ವಿರೋಧಿಸುತ್ತಾರೆ.

ಸಮಸುಖ ಎಂದರೆ ಶ್ರೀಮಂತರು ಮತ್ತು ಬಡವರಿಗೆ ಒಂದೇ ತೆರನಾದ ಬದುಕು ಇರುತ್ತದೆ. ಶ್ರೀಮಂತರಿಗೆ ಒಂದು ರೀತಿಯ ಸುಖ ಮತ್ತು ಬಡವರಿಗೆ ಒಂದು ರೀತಿಯ ಸುಖ ಇರುವುದಿಲ್ಲ. ಎಲ್ಲ ಜೀವಗಳೂ ನೆಮ್ಮದಿಯಿಂದ ಬದುಕಲು

ಬಯಸುತ್ತವೆ. ಈ ಭೂಮಿಯ ಮೇಲೆ ಬೇರೆಯವರಿಗೆ ತೊಂದರೆ ಕೊಡದೆ, ದುಡಿದು ಸುಖವಾಗಿ ಬದುಕುವ ಹಕ್ಕನ್ನು ಪ್ರತಿಯೊಬ್ಬರೂ ಪಡೆದಿದ್ದಾರೆ. ಬೇರೆಯವರ ಶೋಷಣೆ ಮಾಡುವ ಹಕ್ಕನ್ನು ಯಾರೂ ಪಡೆದಿಲ್ಲ ಎಂದು ಬಸವಣ್ಣನವರು ವರ್ಗಭೇದ ನೀತಿಯನ್ನು ವಿರೋಧಿಸುತ್ತಾರೆ.

ಎಲ್ಲ ಮಾನವರು ಪ್ರೇಮಭಾವದೊಂದಿಗೆ, ನದಿಯೊಳಗೆ ನದಿ ಬೆರೆತ ಹಾಗೆ ಒಂದಾಗಿ ಬದುಕಬೇಕು. ಯಾರೂ ಹೆಚ್ಚಿನವರಲ್ಲ ಯಾರೂ ಕಡಿಮೆಯಲ್ಲ. ಎಲ್ಲರೂ ಸಮಾನರು. ಆದ್ದರಿಂದ ಎಲ್ಲ ಜಾತಿ, ಜನಾಂಗ ಮತ್ತು ಧರ್ಮದವರು ಸೇರಿ ಒಂದಾಗಿ ಬದುಕಬೇಕು. ಇಂಥ ಪ್ರಜ್ಞೆಯನ್ನು ಮೂಡಿಸುವುದೇ ಇಷ್ಟಲಿಂಗ ಪೂಜೆಯ ಉದ್ದೇಶ ವಾಗಿದೆ. ಒಂದು ವೇಳೆ ಇಷ್ಟಲಿಂಗ ಪೂಜಕರು ಈ ರೀತಿಯ ಪ್ರಜ್ಞೆಯನ್ನು ಬೆಳೆಸಿಕೊಳ್ಳ ದಿದ್ದರೆ ಮಾನವ ಏಕತೆ ಸಾಧಿಸಲಿಕ್ಕಾಗದು. ಆಗ ಇಷ್ಟಲಿಂಗ ಪೂಜೆಯ ಉದ್ದೇಶ ಈಡೇರದು. ಹೀಗೆ ನಿರರ್ಥಕ ಪೂಜೆ ಮಾಡಬೇಕಿಲ್ಲ ಎಂದು ಎಚ್ಚರಿಸುತ್ತಾರೆ.

ಬಸವಣ್ಣನವರ ಆಶಯದಂತೆ ಲಿಂಗಭೇದ, ವರ್ಣಭೇದ ಮತ್ತು ವರ್ಗಭೇದ ಗಳನ್ನು ಅಳಿಸಿಹಾಕಿ, ನದಿಯೊಳಗೆ ನದಿ ಕೂಡುವ ಹಾಗೆ ಎಲ್ಲ ದೇಶಗಳ ಮತ್ತು ಎಲ್ಲ ಧರ್ಮಗಳ ಮಾನವರ ಏಕತೆಯನ್ನು ಸಾಧಿಸಿದಾಗ ಜಗತ್ತಿನಲ್ಲಿ ಶೋಷಣೆ ಎಂಬುದು ಇರುವುದಿಲ್ಲ. ಯುದ್ಧಗಳು ಇರುವುದಿಲ್ಲ. ಜನಾಂಗಹತ್ಯೆ ಇರುವುದಿಲ್ಲ. ಇಂಥ ಒಂದು ವ್ಯವಸ್ಥೆಯ ಕನಸನ್ನು ಬಸವಣ್ಣನವರು ಕಂಡಿದ್ದರು.

ಬಸವಣ್ಣನವರು ಕಲ್ಯಾಣ ರಾಜ್ಯದ ಪ್ರಧಾನಿಯಾಗಿದ್ದ ಅವಧಿಯಲ್ಲಿ ಒಂದು ಯುದ್ಧವೂ ನಡೆಯಲಿಲ್ಲ. "ಕಲ್ಯಾಣದಲ್ಲಿ ಕೊಡುವವರುಂಟು ಬೇಡುವವರಿಲ್ಲ" ಎಂದು ಬಸವಣ್ಣನವರೇ ಹೇಳಿದ್ದಾರೆ. "ಬಸವ ರಾಜ್ಯದ ಸಿರಿಯು, ಬಸವ ಬಡವರ ನಿಧಿಯು" ಎಂದು ಆ ಕಾಲದ ಜನಪದ ಕವಿಯೊಬ್ಬ ಹಾಡಿದ್ದಾನೆ. ಬಸವಣ್ಣನವರು ಪ್ರಧಾನಿಯಾಗಿ ದ್ದಾಗ ಕಾಯಕಕ್ಕೆ ಬಹಳಷ್ಟು ಮಹತ್ವ ನೀಡಿದರು. ಜನರು ಕಾಯಕದಲ್ಲಿ ತಲ್ಲೀನರಾಗಿ ಯೋಗ್ಯರೀತಿಯಲ್ಲಿ ಉತ್ಪಾದನೆ ಮಾಡಿದರು. ಯಾರಿಗೂ ಬೇಡದೆ ಬದುಕುವ ಸಾಮರ್ಥ್ಯ ವನ್ನು ಪಡೆದರು. ಜನರೆಲ್ಲ ಚೆನ್ನಾಗಿ ಉತ್ಪಾದನೆಯಲ್ಲಿ ತೊಡಗಿದ್ದರಿಂದ ರಾಜ್ಯದ ಭಂಡಾರವೂ ತುಂಬಿತು. ಹೀಗೆ ಬಸವಣ್ಣನವರು ನೈಸರ್ಗಿಕ ಮತ್ತು ಮಾನವ ಸಂಪನ್ಮೂಲ ಗಳ ಸದ್ಬಳಕೆಯೊಂದಿಗೆ ಸಮಾನತೆಯಿಂದ ಕೂಡಿದ ಸುಂದರ ಸಮಾಜವನ್ನು ನಿರ್ಮಿಸಿದರು. ಇಂಥ ಒಂದು ಸಮಾಜ ಮಧ್ಯ ಯುಗದ ಅದ್ವಿತೀಯ ಸಮಾಜವಾಗಿತ್ತು.

ಜಗಜ್ಜ್ಯೋತಿ ಬಸವಣ್ಣನವರು ಮಹಾನ್ ಮಾನವತಾವಾದಿಗಳಾಗಿದ್ದರು. ಮಹಾನ್ ಆಡಳಿತಗಾರರಾಗಿದ್ದರು. ಮಹಾನ್ ಸಾಮಾಜಿಕ ಮನೋವಿಜ್ಞಾನಿಗಳಾಗಿದ್ದರು.

ಮಹಾನ್ ಅರ್ಥಶಾಸ್ತ್ರಜ್ಞರಾಗಿದ್ದರು. ಮಹಾನ್ ಸಾಹಿತಿಗಳಾಗಿದ್ದರು. ಮಹಾನ್ ಭಾಷಾ ಪಂಡಿತರಾಗಿದ್ದರು. ಬದುಕಿನ ಎಲ್ಲ ರಂಗಗಳಲ್ಲಿ ಮಹಾಜ್ಞಾನಿಗಳಾಗಿದ್ದರು. ಮಹಾನ್ ದಾರ್ಶನಿಕರಾಗಿದ್ದರು.

ಅವರಿಗೆ ಇಡೀ ಸಮಾಜ ವ್ಯವಸ್ಥೆಯ ಕಲ್ಪನೆ ಇತ್ತು. ಒಂದು ಹೊಸ ಸಮಾಜ ಹೇಗೆ ಇರಬೇಕು ಎಂಬುದರ ಪ್ರಜ್ಞೆ ಇತ್ತು. ಅವರು ಧರ್ಮ, ಸಮಾಜ, ಸಂಸ್ಕೃತಿ ಮತ್ತು ಅರ್ಥಶಾಸ್ತ್ರವನ್ನು ಬೇರೆಬೇರೆಯಾಗಿ ನೋಡಲಿಲ್ಲ, ಕುಟುಂಬ, ಸಮಾಜ, ದೇಶ ಮತ್ತು ಜಗತ್ತನ್ನು ಬೇರೆಬೇರೆಯಾಗಿ ನೋಡಲಿಲ್ಲ. ಇವೆಲ್ಲವುಗಳ ಮಧ್ಯದ ಘನವಾದ ಸಂಬಂಧವನ್ನು ಗುರುತಿಸಿದರು. ಇವೆಲ್ಲವುಗಳ ಒಟ್ಟು ಅಭಿವೃದ್ಧಿಯಿಂದ ಮಾತ್ರ ಮಾನವರನ್ನು ಎಲ್ಲ ಬಂಧನಗಳಿಂದ ವಿಮೋಚನೆಗೊಳಿಸಬಹುದು ಎಂಬುದನ್ನು ಅವರು ಬಹುಬೇಗ ಕಂಡುಕೊಂಡರು.

ಮಾನವ ಸಂಪನ್ಮೂಲ ಮತ್ತು ನೈಸರ್ಗಿಕ ಸಂಪನ್ಮೂಲಗಳ ಯೋಗ್ಯ ಬಳಕೆಯಿಂದ ಜನೋಪಯೋಗಿ ವಸ್ತುಗಳ ಉತ್ಪಾದನೆ ಮಾಡಬೇಕು. ಇದೇ ಕಾಯಕ ತತ್ತ್ವ ವಸ್ತುಗಳನ್ನು ಹಿತಮಿತವಾಗಿ ಬಳಸುವುದು ಪ್ರಸಾದ ತತ್ತ್ವ ನಮ್ಮ ಸಂಪತ್ತಿನ ಮೂಲಕ ಸಮಾಜಸೇವೆ ಮಾಡುವುದು ದಾಸೋಹ ತತ್ತ್ವ

ಹೀಗೆ ಕಾಯಕ, ಪ್ರಸಾದ ಮತ್ತು ದಾಸೋಹ ತತ್ತ್ವಗಳಲ್ಲಿ ನಿಸರ್ಗತತ್ತ್ವ ಅಡಕ ವಾಗಿದೆ. ಜಗತ್ತಿನಲ್ಲಿ ಎಲ್ಲವೂ ಕಾಯಕ ನಿರತವಾಗಿವೆ. ಪ್ರಸಾದದ ಕ್ರಮವನ್ನು ಅನುಸರಿಸಿ ದಾಸೋಹ ಮಾಡುತ್ತಿವೆ. ನದಿಗಳು ಹರಿಯುವ ಕಾಯಕ ಮಾಡುತ್ತಿವೆ. ದಾಸೋಹ ಭಾವದಿಂದ ಸಮುದ್ರವನ್ನು ಸೇರುತ್ತಿವೆ. ಆ ಮೂಲಕ ಜನರ ನೀರಿನ ಸಮಸ್ಯೆ ಬಗೆಹರಿಸುತ್ತಿವೆ. ಅಲ್ಲದೆ ಭೂಭಾಗಕ್ಕಿಂತಲೂ ದೊಡ್ಡದಾದ ಸಮುದ್ರದ ನೀರು ಹೆಚ್ಚು ಉಪ್ಪಾಗದಂತೆ ನೋಡಿಕೊಳ್ಳುತ್ತ ದಾಸೋಹ ಭಾವದಿಂದ ಸಮುದ್ರ ಜೀವಿಗಳ ಜೀವ ಉಳಿಸುತ್ತಿವೆ. ರೈತರು ದಿನವಿಡೀ ದುಡಿದು ರಾತ್ರಿ ಮನೆಗೆ ಬಂದರೂ ಭೂಮಿಯಲ್ಲಿನ ಎರೆಹುಳುಗಳು ಕಾಯಕ ನಿರತವಾಗಿರುತ್ತವೆ. ಅವು ದಾಸೋಹ ಭಾವದಿಂದ ರೈತರ ಭೂಮಿಯನ್ನು ಹದಗೊಳಿಸುತ್ತಿರುತ್ತವೆ. ಮರಗಳು ನಿಂತಲ್ಲೇ ಕಾಯಕ ನಿರತವಾಗಿ ಜನರಿಗೆ ದಾಸೋಹ ಭಾವದಿಂದ ಫಲಗಳನ್ನು ಕೊಡುತ್ತಿರುತ್ತವೆ. ಜೇನು ನೊಣಗಳು ಹೂವಿನ ಮಕರಂದವನ್ನು ಹೀರುತ್ತವೆ. ಆದರೆ ದಾಸೋಹ ಭಾವದಿಂದ ಪರಾಗಸ್ಪರ್ಶದ ಕಾಯಕದ ಮೂಲಕ ಆ ಹೂವಿನ ಮರ ಮತ್ತು ಬಳ್ಳಿಗಳ ಸಂತತಿಯನ್ನು ಹೆಚ್ಚಿಸು ತ್ತಿರುತ್ತವೆ. ಹೀಗೆ ಇಡೀ ಜಗತ್ತೇ ಕಾಯಕ, ಪ್ರಸಾದ ಮತ್ತು ದಾಸೋಹ ತತ್ತ್ವದಿಂದ ಕೂಡಿದೆ.

ಕಾಯಕವೆಂಬುದು ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುತ್ತ, ಬದುಕನ್ನು ಹೆಚ್ಚು ಹೆಚ್ಚು ಸುಂದರಗೊಳಿಸುವ ಉತ್ಪಾದನಾ ಕ್ರಿಯೆ. ನಮ್ಮ ಉತ್ಪಾದನಾ ವ್ಯವಸ್ಥೆ ಜೀವಜಾಲ ಸಮತೋಲನಕ್ಕೆ ಧಕ್ಕೆ ಉಂಟುಮಾಡಬಾರದು. ನಮ್ಮ ನದಿ, ಸಮುದ್ರ, ಅರಣ್ಯ ಮತ್ತಿತರ ನೈಸರ್ಗಿಕ ಸಂಪನ್ಮೂಲಗಳು ವಿನಾಶದ ಅಂಚಿಗೆ ತಲುಪದ ಹಾಗೆ ಎಚ್ಚರಿಕೆ ವಹಿಸಿ ಉತ್ಪಾದನೆಯಲ್ಲಿ ತೊಡಗಬೇಕು. ಸತ್ಯ ಶುದ್ಧವಾದುದನ್ನೇ ಉತ್ಪಾದಿಸಬೇಕು. ಇದು ಕಾಯಕ ಪ್ರಜ್ಞೆ.

ಜಗತ್ತಿನ ಎಲ್ಲ ವಸ್ತುಗಳು ದೇವರ ಕಾಣಿಕೆ. ಇದಕ್ಕೆ ಪ್ರಸಾದ ಎಂದು ಕರೆಯುವರು ಪ್ರತಿಯೊಂದು ಕೂಡ ದೇವರ ಕಾಣಿಕೆಯೆ ಆಗಿದೆ. ಆದ್ದರಿಂದ ಎಲ್ಲ ಸಂಪನ್ಮೂಲಗಳನ್ನು ಪ್ರಸಾದ ರೂಪದಲ್ಲಿ ಬಳಸಬೇಕು. ಯಾವುದನ್ನೂ ಹಾಳು ಮಾಡಬಾರದು. ಒಂದು ಹನಿ ನೀರನ್ನೂ ಹಾಳು ಮಾಡಬಾರದು. ಒಂದು ತುತ್ತು ಅನ್ನವನ್ನೂ ಹಾಳುಮಾಡಬಾರದು. ಅವಶ್ಯಕತೆಗಿಂತ ಹೆಚ್ಚಿಗೆ ಯಾವುದನ್ನೂ ಬಳಸಬಾರದು. ಇದು ಪ್ರಸಾದ ಪ್ರಜ್ಞೆ.

ನಾವು ಉತ್ಪಾದಿಸುವುದು ಮತ್ತು ಗಳಿಸುವುದು. ಕೇವಲ ನಮಗಾಗಿ ಮತ್ತು ನಮ್ಮ ಕುಟುಂಬಕ್ಕಾಗಿ ಅಲ್ಲ. ಅದರಲ್ಲಿ ಸಮಾಜದ ಪಾಲೂ ಇದೆ. ಇಡಿ ಸಮಾಜವನ್ನೇ ದೇವರು ಎಂದು ಭಾವಿಸಿ. ನಾವು ಪಡೆದದ್ದರಲ್ಲಿನ ಹೆಚ್ಚಿನ ಪಾಲನ್ನು ದಾಸೋಹ ಭಾವದಲ್ಲಿ ಸಮಾಜಕ್ಕೆ ಅರ್ಪಿಸಬೇಕು. ಇಂಥ ಸಾಮಾಜಿಕ ಪ್ರಜ್ಞೆಯೊಂದಿಗೆ ಸಮಾಜ ರಕ್ಷಣೆ ಮಾಡಬೇಕು. ಯಾರೂ ನೋವಿಗೆ ಒಳಗಾಗದಂಥ ಮತ್ತು ಯಾರೂ ಹಸಿವಿನಿಂದ ಬಳಲದಂಥ ಸಮಾಜವನ್ನು ನಿರ್ಮಾಣ ಮಾಡಬೇಕು. ಇದು ದಾಸೋಹ ಪ್ರಜ್ಞೆ.

ಹೀಗೆ ಸಾಮಾಜಿಕ ಪ್ರಜ್ಞೆಯ ಬಸವಧರ್ಮದಲ್ಲಿ ವ್ಯಕ್ತಿಗತ ಮೋಕ್ಷ ಎಂಬುದು ಇಲ್ಲ. ಶೋಷಣೆ ಇಲ್ಲದ ಸುಸಂಸ್ಕೃತ ಸಮಾಜದ ನಿರ್ಮಾಣದಲ್ಲಿ ತೊಡಗುವ ಆನಂದವೇ ಮೋಕ್ಷದ ಆನಂದ. ಹೀಗೆ ಬಸವಧರ್ಮದಲ್ಲಿ ಮೋಕ್ಷ ಎಂಬುದು ಮಾನವನ ಜೀವಿತಾವಧಿಯಲ್ಲೇ ಲಭಿಸುವಂಥದ್ದು. ಇಲ್ಲಿ ಮೋಕ್ಷ ಎಂಬುದು ಅತ್ಯುನ್ನತ ಆನಂದದ ಮನಸ್ಥಿತಿ.

ಬಸವಧರ್ಮದ ಮೂಲ ತತ್ತ್ವಗಳಾದ ಕಾಯಕ, ಪ್ರಸಾದ ಮತ್ತು ದಾಸೋಹ ತತ್ತ್ವಗಳು ಸಾಮಾಜಿಕ ಅರ್ಥಶಾಸ್ತ್ರದ ತತ್ತ್ವಗಳಾಗಿವೆ. ಆದ್ದರಿಂದಲೇ ಕಾಯಕ ಪ್ರಜ್ಞೆ ಯೋಗ್ಯ ಉತ್ಪಾದನಾ ವ್ಯವಸ್ಥೆಯನ್ನು ರೂಪಿಸುವುದು. ಪ್ರಸಾದ ಪ್ರಜ್ಞೆ ಯೋಗ್ಯರೀತಿಯಲ್ಲಿ ವಸ್ತುಗಳನ್ನು ಉಪಯೋಗಿಸುವ ವ್ಯವಸ್ಥೆಯನ್ನು ರೂಪಿಸುವುದು. ದಾಸೋಹ ಪ್ರಜ್ಞೆ ಯೋಗ್ಯರೀತಿಯಲ್ಲಿ ವಸ್ತುಗಳ ವಿತರಣೆಯ ವ್ಯವಸ್ಥೆಯನ್ನು ರೂಪಿಸುವುದು.

ಇಂಥ ವ್ಯವಸ್ಥಿತ ಸಮಾಜದಲ್ಲಿ. ಯಾವುದೇ ರೀತಿಯ ಭೇದಭಾವಗಳು ಇರುವುದಿಲ್ಲ. ಕ್ರೌರ್ಯ ಇರುವುದಿಲ್ಲ. ಎಲ್ಲರೂ ಘನತೆಯಿಂದ ಮತ್ತು ಸೇವಾಭಾವದಿಂದ ಬದುಕುವರು. ಪ್ರತಿಯೊಬ್ಬರು ಚೆನ್ನಾಗಿ ಬದುಕುವಂಥ ವಾತಾವರಣ ಸೃಷ್ಟಿಸುವರು.

ಬಸವಣ್ಣನವರ ಕನಸು ೨೧ನೇ ಶತಮಾನದಲ್ಲಿ ನನಸಾದರೆ. ಈ ಜಗತ್ತು ಎಲ್ಲರೀತಿಯ ಸಮಸ್ಯೆಗಳಿಂದ ಮುಕ್ತವಾಗಿ ಇಡೀ ಮಾನವಕುಲ ಒಂದಾಗುವುದು.

(೨೦೧೦ನೇ ಜುಲೈ ೧೧ರಂದು ಕೆನಡಾದ ವಿಂಡ್ಸರ್ ನಗರದಲ್ಲಿ, ವಿಂಡ್ಸರ್ ಮತ್ತು ಅಮೆರಿಕದ ಡೆಟ್ರಾಯಿಟ್ ನಗರಗಳ ವಿ.ಎಸ್.ಎನ್.ಎ ಸದಸ್ಯರ ಸಭೆಯಲ್ಲಿ ಮಾಡಿದ ಭಾಷಣ.)

●

# ಬಸವಣ್ಣನವರ ಪರ್ಯಾಯ ಸಮಾಜ

"ಭೇರುಂಡ ಪಕ್ಷಿಗೆ ದೇಹವೊಂದೇ
ತಲೆ ಎರಡರ ನಡುವೆ ಕನ್ನವಡ ಕಟ್ಟಿ
ಒಂದು ತಲೆಯಲಿ ಹಾಲನೆರೆದು
ಒಂದು ತಲೆಯಲಿ ವಿಷವನೆರೆದಡೆ
ದೇಹವೊಂದೇ ವಿಷ ಬಿಡುವುದೆ ಅಯ್ಯಾ?
ಲಿಂಗದಲಿ ಪೂಜೆಯ ಮಾಡಿ ಜಂಗಮಲ್ಲಿ
ನಿಂದೆಯ ಮಾಡಿದಡೆ
ನಾ ಬೆಂದೆ ಕಾಣಾ ಕೂಡಲಸಂಗಮದೇವಾ."

ಬಸವಣ್ಣನವರ ಆಧ್ಯಾತ್ಮಿಕ (ಚೈತನ್ಯಾತ್ಮಕ) ಭೌತಿಕವಾದದ ಮಹತ್ವವನ್ನು ಸಾರುವ ವಚನವಿದು. ಗಂಡಭೇರುಂಡ ಪಕ್ಷಿಯ ಕಾವ್ಯಪ್ರತಿಮೆ ಮೂಲಕ ಅವರು ಆಧ್ಯಾತ್ಮಿಕ ಜಗತ್ತು ಮತ್ತು ಭೌತಿಕ ಜಗತ್ತಿನ ಮೂಲ ಒಂದೇ ಎಂದು ತೋರಿಸಿಕೊಟ್ಟಿದ್ದಾರೆ. ಭೇರುಂಡನ ಎರಡೂ ತಲೆಗಳ ಮಧ್ಯೆ ಕನ್ನವಡ (ಪರದೆ) ಕಟ್ಟಿ, ಒಂದು ಕಡೆ ಹಾಲು ಮತ್ತು ಇನ್ನೊಂದು ಕಡೆ ವಿಷ ಎರೆದರೆ ಅವೆರಡೂ ಒಂದೇ ಜಠರದಲ್ಲಿ ಕೂಡಿ ಎಲ್ಲವೂ ವಿಷವಾಗಿ ಪಕ್ಷಿ ಸಾಯುವುದರಲ್ಲಿ ಸಂಶಯವಿಲ್ಲ. ಅದೇ ರೀತಿ ಇಷ್ಟಲಿಂಗ ಪೂಜಿಸಿ ಜಂಗಮ (ಸಮಾಜ) ಲಿಂಗವನ್ನು ಕಡೆಗಣಿಸಿದರೆ, ಅಂದರೆ ಸಾಮಾಜಿಕ ಪ್ರಜ್ಞೆ ಇಲ್ಲದೆ ಬರಿ ಆಧ್ಯಾತ್ಮಿಕವಾಗಿ ಬದುಕಿದರೆ ಪ್ರಯೋಜನವಿಲ್ಲ ಎಂದು ಸೂಚಿಸಿದ್ದಾರೆ.

ವಿಜ್ಞಾನ ಮತ್ತು ಅಧ್ಯಾತ್ಮಗಳನ್ನು ಒಂದುಗೂಡಿಸುವ ಯತ್ನ ೨೧ನೇ ಶತಮಾನ ದಲ್ಲಿ ಬಿರುಸಿನಿಂದ ಪ್ರಾರಂಭವಾಗಿದೆ. ಹೀಗಾಗದಿದ್ದರೆ ಮಾನವಕುಲಕ್ಕೆ ಭವಿಷ್ಯವಿಲ್ಲ ಎಂಬ ತೀರ್ಮಾನಕ್ಕೆ ಜೀವಕಾರುಣ್ಯದಿಂದ ಕೂಡಿದ ವಿಜ್ಞಾನಿಗಳು ಮತ್ತು ತತ್ತ್ವಜ್ಞಾನಿಗಳು

ವಿಶ್ವದ ಅನೇಕ ಕಡೆಗಳಲ್ಲಿ ಯತ್ನಿಸುತ್ತಿದ್ದಾರೆ. ಆದರೆ ಬಸವಣ್ಣನವರು ೮೫೦ ವರ್ಷಗಳ ಹಿಂದೆಯೆ ಆಧ್ಯಾತ್ಮಿಕ ಜಗತ್ತಿನ ಸುಜ್ಞಾನ ಮತ್ತು ಭೌತಿಕ ಜಗತ್ತಿನ ವಿಜ್ಞಾನವನ್ನು ಒಂದುಗೂಡಿಸುವುದರ ಮೂಲಕ ಹೊಸತನ್ನು ಸಾಧಿಸಿದ್ದಾರೆ. ಈ ಸಂಗಮತತ್ತ್ವಕ್ಕೆ ಚೈತನ್ಯಾತ್ಮಕ ಭೌತಿಕವಾದವೆಂದೂ ಬಸವಾದ್ವೈತವೆಂದೂ ಕರೆಯಬಹುದು.

ಆಧ್ಯಾತ್ಮಿಕ ಭೌತಿಕವಾದದ ಪ್ರಕಾರ ಲಿಂಗಾಂಗಸಾಮರಸ್ಯವೆಂದರೆ ಆಧ್ಯಾತ್ಮಿಕ ಜಗತ್ತು ಮತ್ತು ಭೌತಿಕ ಜಗತ್ತಿನ ಮಧ್ಯೆ ಅದ್ವೈತ ಸಾಧಿಸುವ ಭೇರುಂಡ ತತ್ತ್ವವೇ ಆಗಿದೆ. ಇದೇ ಬಸವಾದ್ವೈತ ಎಂಬ ಚೈತನ್ಯಾತ್ಮಕ ಭೌತಿಕವಾದ. ವ್ಯಷ್ಟಿ–ಸಮಷ್ಟಿ, ಇಷ್ಟಲಿಂಗ–ಜಂಗಮಲಿಂಗ, ಮಾನವನ ಒಳಲೋಕ–ಹೊರಲೋಕ, ಆಧ್ಯಾತ್ಮಿಕ ಲೋಕ–ಭೌತಿಕ ಲೋಕ, ಆತ್ಮಜ್ಞಾನ–ವಿಜ್ಞಾನ ಇವುಗಳಲ್ಲಿ ಅದ್ವೈತ ಸಾಧಿಸುವುದರ ಮೂಲಕ ಮೇಲು–ಕೀಳುಗಳನ್ನು ಮೀರಿದ ಮಾನವೀಯ ಸಮಾಜದ ರಚನೆ ಮಾಡುವುದು ಬಸವಣ್ಣನವರ ಗುರಿಯಾಗಿತ್ತು. ಅವರು ಈ ನಿಟ್ಟಿನಲ್ಲಿ ಬಹಳಷ್ಟು ಸಾಧಿಸಿ ತೋರಿಸಿದರು.

ಸಾಂಪ್ರದಾಯಿಕವಾಗಿ ಬೆಳೆದು ಬಂದ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ನೇರವಾಗಿ ಎದುರಿಸದೆ, ಆಧ್ಯಾತ್ಮಿಕ ಭೌತಿಕವಾದದ ಹಿನ್ನೆಲೆಯಲ್ಲಿ ಸರ್ವ ಸಮಾನತೆಯ ಪರ್ಯಾಯ ಸಮಾಜವೊಂದನ್ನು ಮೌನಕ್ರಾಂತಿಯ ಮೂಲಕ ಹೇಗೆ ರಚಿಸಬೇಕು ಎಂಬುದನ್ನು ತೋರಿಸಿಕೊಟ್ಟವರು ಮಹಾನುಭಾವಿ ಬಸವಣ್ಣನವರು. ಬಸವಣ್ಣನವರ ಈ ಮೌನಕ್ರಾಂತಿ ಇಡೀ ವಿಶ್ವಕ್ಕೆ ಮಾದರಿಯಾಗಿದೆ.

ಹೊರ ಜಗತ್ತು ಮನುಷ್ಯನನ್ನು ಆಳುತ್ತದೆ ಎಂಬುದು ಆಧುನಿಕ ಚಿಂತನೆಯಾಗಿದೆ. ಒಳಜಗತ್ತು ಮನುಷ್ಯನನ್ನು ಆಳುತ್ತದೆ ಎಂಬುದು ಪುರಾತನ ಭಾವನೆಯಾಗಿದೆ. ಆದರೆ ಅಂತರಂಗ–ಬಹಿರಂಗ ಶುದ್ಧಿಯ ಮೂಲಕ ಒಳ ಮತ್ತು ಹೊರ ಜಗತ್ತುಗಳನ್ನು ಹೇಗೆ ಆಳಬೇಕು ಎಂಬುದನ್ನು ಬಸವಾದ್ವೈತ ಸೂಚಿಸುತ್ತದೆ. ಬಸವಣ್ಣನವರು ಇಷ್ಟಲಿಂಗದ ಮೂಲಕ ವ್ಯಷ್ಟಿಪ್ರಜ್ಞೆ ಬೆಳೆಸಿದರು. ಕಾಯಕದ ಮೂಲಕ ಸಾಮಾಜಿಕ ಶಕ್ತಿ ವೃದ್ಧಿಯಾಗುವಂತೆ ಮಾಡಿದರು. ದಾಸೋಹದ ಮೂಲಕ ಸಮಷ್ಟಿ ಪ್ರಜ್ಞೆಯ ವಿಕಸನ ಮಾಡಿದರು. ಮಾನವನ ಆಂತರಿಕ ಜಗತ್ತು ಕಾಲಾತೀತವಾಗಿದೆ. ಆದರೆ ಬಾಹ್ಯ ಜಗತ್ತು ಸದಾ ಚಲನಶೀಲವಾಗಿದೆ ಎಂಬುದರ ಅರಿವು ಮೂಡಿಸಿದರು.

ದಾಸೋಹ ಪ್ರಜ್ಞೆಯ ಕಾಯಕ ತತ್ತ್ವವು ಸಮಾಜೋ ಕೌಟುಂಬಿಕ ಅರ್ಥ ಶಾಸ್ತ್ರವಾಗಿದೆ. 'ಶರಣ ಸತಿ, ಲಿಂಗ ಪತಿ' ಎಂದು ಹೇಳುವಲ್ಲಿ ಇಡೀ ವಿಶ್ವವೇ ಕುಟುಂಬ ಮಯವಾಗಿದೆ. ಕುಟುಂಬ ವ್ಯವಸ್ಥೆಯನ್ನು ಸಾವಕಾಶವಾಗಿ ಕಳೆದುಕೊಳ್ಳುತ್ತಿರುವ

ಆಧುನಿಕ ಸಮಾಜ ಎಂಥ ದುರ್ಗತಿಯನ್ನು ತಲುಪಬಲ್ಲುದು ಎಂಬುದಕ್ಕೆ ದೈನಂದಿನ ವಿದ್ಯಮಾನಗಳೇ ಸಾಕ್ಷಿಯಾಗಿವೆ.

ಬಸವಣ್ಣನವರು ಗುರು-ಲಿಂಗ-ಜಂಗಮವನ್ನು ದೇವರ ಮೂರು ಸ್ವರೂಪ ಎಂದು ಪರಿಗಣಿಸುವುದರ ಮೂಲಕ ಅರಿವು, ಅಂತಃಸಾಕ್ಷಿ ಮತ್ತು ಸಮಾಜಕ್ಕೆ ಇರುವ ಸಮಾನ ಮಹತ್ವವನ್ನು ತೋರಿಸಿಕೊಟ್ಟರು. ವೈದಿಕ ದೇವತೆಗಳು ಮತ್ತು ಕ್ಷುದ್ರ ದೇವತೆಗಳನ್ನು ಮೊದಲು ಮಾಡಿ ೩೩ ಕೋಟಿ ದೇವತೆಗಳನ್ನೆಲ್ಲ ದೂರ ಸರಿಸಿ ಅಂತಃಸಾಕ್ಷಿಯೆ ದೇವರೆಂದು ಹೇಳಿಕೊಟ್ಟರು. ಭೌತಿಕ ಆಸೆಗಳಿಂದ ಹೊರಬಂದು ಕೆಳವರ್ಗೀಕರಣವಾಗುವ ಮತ್ತು ಹುಟ್ಟಿನ ಮೂಲದ ಅಹಂನಿಂದ ಹೊರಬಂದು ಕೆಳಜಾತೀಕರಣವಾಗುವ ಬಗೆಯನ್ನು ಹೇಳಿಕೊಟ್ಟರು. ನಮ್ಮೊಳಗೆ ಕ್ರಾಂತಿಯಾಗದೆ ಹೊರಗಡೆ ಕ್ರಾಂತಿಯಾಗುವುದು ಸಾಧ್ಯವಿಲ್ಲ ಎಂಬುದನ್ನು ಜಗತ್ತು ತಿಳಿಯುವಂತೆ ಮಾಡಿದರು. ಬಸವಣ್ಣನವರ ಪರ್ಯಾಯ ಸಮಾಜದಲ್ಲಿ ಮನುಷ್ಯರು ತಮ್ಮ ವರ್ಗ ಮತ್ತು ವರ್ಣಗಳಿಂದ ಪ್ರಾಮುಖ್ಯ ಪಡೆಯದೆ ಗುಣ ಮತ್ತು ಕ್ರಿಯೆಯ ಮೂಲಕ ಪ್ರಾಮುಖ್ಯ ಪಡೆಯುತ್ತಾರೆ.

**ಕಾಯಕಜೀವಿಗಳ ಸಮಾಜ**

ನಮ್ಮ ಸಮಾಜ ಸಹಸ್ರಾರು ವರ್ಷಗಳಿಂದ ರೈತಕೇಂದ್ರಿತ ಸಮಾಜವಾಗಿತ್ತು. ಭೂಪಾಲರು ಮತ್ತು ಜಮೀನುದಾರರು ವಿಧಿಸಿದ ಸಾಮಾಜಿಕ ನಿಯಮಗಳನ್ನು ಬಡ ರೈತರೂ ಪಾಲಿಸಬೇಕಿತ್ತು. ಯಥಾಸ್ಥಿತಿಯನ್ನು ಮುಂದುವರಿಸಿಕೊಂಡು ಹೋಗುವ ರೀತಿಯಲ್ಲಿ ಆಯ ಪದ್ಧತಿಯ ಸ್ವಯಂ ಪರಿಪೂರ್ಣ ಸಮಾಜ ವ್ಯವಸ್ಥೆ ಗಟ್ಟಿಗೊಂಡಿತ್ತು. ಕಾಯಕಜೀವಿಗಳು ಜಾತಿ ಉಪಜಾತಿ ಜೀವಿಗಳಾಗಿ ಪರಿವರ್ತನೆಗೊಂಡರು. ಹಿಂದಿನಿಂದ ಬಂದ ರೈತಕೇಂದ್ರಿತ ಸಮಾಜದಲ್ಲೇ ಒಟ್ಟಾರೆ ಕಾಯಕಜೀವಿಗಳ ಕೇಂದ್ರಿತ ಪರ್ಯಾಯ ಸಮಾಜವನ್ನು ಮೊದಲಿಗೆ ರಚಿಸಿದ ಕೀರ್ತಿ ಬಸವಣ್ಣನವರಿಗೆ ಸಲ್ಲುತ್ತದೆ. ಈ ರೀತಿಯ ಬದಲಾವಣೆಯಿಂದ ಸಮಾಜದಲ್ಲಿ ಚಿಂತನ-ಮಂಥನ ಪ್ರಾರಂಭವಾಯಿತು. ಪ್ರಶ್ನಿಸುವ ಮತ್ತು ಸಮಾನತೆಯ ಪ್ರಜ್ಞೆ ಮೂಡಿತು. ಹೀಗೆ ಅಸಮಾನತೆಯ ಸಮಾಜದಲ್ಲಿ ಸಮಾನತೆಯ ಪ್ರಜ್ಞೆ ಮೂಡಿಸುವ ಪರ್ಯಾಯ ಸಮಾಜ ರಚನೆಯ ರಹಸ್ಯವನ್ನು ಬಸವಣ್ಣನವರು ತಿಳಿಸಿಕೊಟ್ಟರು. ಬಸವಣ್ಣನವರ ಕಾಯಕತತ್ತ್ವ ಅರ್ಥಶಾಸ್ತ್ರ ಮತ್ತು ಪರಮಾರ್ಥಶಾಸ್ತ್ರದ ತಿರುಳನ್ನು ಒಳಗೊಂಡಿದೆ. ಕಾಯಕಕ್ಕೆ ದಾಸೋಹದ ಚೌಕಟ್ಟಿದೆ. ಈ ದಾಸೋಹದ ಕಟ್ಟಳೆ ಇಲ್ಲದಿದ್ದರೆ ಸತ್ಕ್ರಿಯೆಯಿಂದ ಗಳಿಸಿದ ಹಣ ಸಂಗ್ರಹವಾದರೂ ಅಹಂ ಸೃಷ್ಟಿಯಾಗುವುದು. ಸಮಾಜದಲ್ಲಿ ಮೇಲು ಕೀಳಿಗೆ ನಾಂದಿಯಾಗುವುದು.

ಜನರು ತಮ್ಮ ತಮ್ಮ ದೈಹಿಕ ಮತ್ತು ಮಾನಸಿಕ ಶಕ್ತಿಗೆ ಅನುಗುಣವಾಗಿ ವಿಭಿನ್ನವಾಗಿರಬಹುದು. ವೈವಿಧ್ಯವು ನಿಸರ್ಗದ ನಿಯಮವಾಗಿದೆ. ಆದರೆ ಆಧ್ಯಾತ್ಮಿಕತೆಯು ಅದರ ಅಭಿನ್ನ ರೂಪವಾಗಿದೆ. ದಾನ ಪಡೆಯುವವರು ದೈನ್ಯಭಾವ ತಾಳುತ್ತ ಹೋಗುವರು. ಕೊಡುವವರಲ್ಲಿ ಅಹಂಕಾರ ಸೃಷ್ಟಿಯಾಗುವ ಸಾಧ್ಯತೆಗಳಿವೆ. ಬಸವಣ್ಣನವರ ಪರ್ಯಾಯ ಸಮಾಜದಲ್ಲಿ ದಾನಕ್ಕೆ ಸ್ಥಾನವಿಲ್ಲ. ಅದರ ಸ್ಥಾನದಲ್ಲಿ ದಾಸೋಹವಿದೆ. ದಾಸೋಹವು ಕೊಡುವವನಲ್ಲಿ ವಿನಮ್ರ ಭಾವವನ್ನೂ ಪಡೆದುಕೊಳ್ಳುವವನಲ್ಲಿ ಸಮತಾ ಭಾವವನ್ನೂ ಸೃಷ್ಟಿಸುತ್ತದೆ. ಪರ್ಯಾಯ ಸಮಾಜವಾದ ಶರಣ ಸಮಾಜದಲ್ಲಿ ಬೇಡುವವರು ಸಿಗದ ಕಾರಣ ಕೊಡುವವರು ಬಡವಾಗುತ್ತಿದ್ದರು!

## ಹೊಸ ಪ್ರಜ್ಞೆ

ಬಡ್ಡಿಯಿಂದ ಸೃಷ್ಟಿಯಾಗುವ ಹಣ ಎಲ್ಲ ಅನಿಷ್ಟಗಳ ಮೂಲ ಎಂಬುದನ್ನು ಬಸವಣ್ಣನವರು ಅರಿತಿದ್ದರು. ಬಸವಣ್ಣನವರ ವಿಮೋಚನಾ ಸಿದ್ಧಾಂತದಲ್ಲಿ ಉದ್ದಂಡ ವೃತ್ತಿಗೆ ಮತ್ತು ಬಡ್ಡಿ ಹಣಕ್ಕೆ ಅವಕಾಶವಿಲ್ಲ. ಬಸವಣ್ಣನವರು ಬಡವರಿಗೆ ಹೊಸ ಕಾಯಕ ಕೊಡಲಿಲ್ಲ. ಹೊಸ ಪ್ರಜ್ಞೆ ಕೊಟ್ಟರು. ಬೇರೆಯವರಿಗೆ ಸಮಸ್ಯೆಯುಂಟುಮಾಡದ ಯಾವುದೇ ಕಾಯಕ ಕೀಳಲ್ಲ ಎಂದರು.

ಮಾನವ ಒಳ ಮತ್ತು ಹೊರ ಜಗತ್ತುಗಳಲ್ಲಿ ಏಕಕಾಲಕ್ಕೆ ಬದುಕುವುದರಿಂದ ಎರಡೂ ಜಗತ್ತುಗಳನ್ನು ಸಮಾನವಾಗಿ ನೋಡಬೇಕು. ಹಾಗೆ ನೋಡುವ ಕ್ರಮವನ್ನು ಬಸವಣ್ಣನವರು ಬದುಕಿ ತೋರಿಸಿದರು.

ಬಸವಣ್ಣನವರು ಬಿಜ್ಜಳನ ರಾಜ್ಯಶಕ್ತಿಯನ್ನು ಪ್ರಶ್ನಿಸಲಿಲ್ಲ. ಆತನ ಸಮಾಜ ವ್ಯವಸ್ಥೆಗೂ ಭಂಗ ತರಲಿಲ್ಲ. ಅರ್ಥ ಸಚಿವರಾಗಿ, ಪ್ರಧಾನಿಯಾಗಿ ಬಿಜ್ಜಳನ ಭಂಡಾರ ತುಂಬಿತುಳುಕುವಂತೆ ಮಾಡಿದರು. ಕಾಯಕದ ಮಹತ್ವ ಸಾರಿ, ಜನ ದುಡಿಮೆಯ ಮೂಲಕ ಸಮೃದ್ಧ ಜೀವನ ಸಾಗಿಸುವಂತೆ ಮಾಡಿದರು. ಬಿಜ್ಜಳನ ಸಾಂಪ್ರದಾಯಿಕ ವ್ಯವಸ್ಥೆಗೂ ಅವರೇ ಮುಂದಾಳಾಗಿದ್ದರು. ಸೃಷ್ಟಿಯಾಗುತ್ತಿದ್ದ ಹೊಸ ಪರ್ಯಾಯ ಸಮಾಜಕ್ಕೂ ಅವರೇ ಮುಂದಾಳಾಗಿದ್ದರು! ಜಾಗತಿಕ ಇತಿಹಾಸದಲ್ಲಿ ಇಂಥ ಇನ್ನೊಂದು ಉದಾಹರಣೆ ಇಲ್ಲ. ಹೀಗೆ ತಾವು ವಿರೋಧಿಸುವ ವ್ಯವಸ್ಥೆಯನ್ನೂ ಸೃಷ್ಟಿಸುವ ವ್ಯವಸ್ಥೆಯನ್ನೂ ಏಕಕಾಲಕ್ಕೆ ನಿಭಾಯಿಸಿದ ಧೀರೋದಾತ್ತ ನಾಯಕರು ಬಸವಣ್ಣನವರು.

ಬಸವಣ್ಣನವರ ಪರ್ಯಾಯ ಸಮಾಜದಲ್ಲಿ ಇರುವಿಕೆಗೆ ಮತ್ತು ಬದುಕಿಗೆ ಸಮಾನ ಸ್ಥಾನವಿತ್ತು. ಇರುವಿಕೆಯು ಭೌತಿಕ ಪ್ರಕ್ರಿಯೆಯಾದರೆ, ಬದುಕು ಆಧ್ಯಾತ್ಮಿಕ

ಪ್ರಕ್ರಿಯೆಯಾಗಿದೆ. ಹೀಗೆ ಬಸವಣ್ಣನವರ ತತ್ತ್ವವು ಈ ಬದುಕನ್ನು ಗೌರವಿಸುವ ತತ್ತ್ವವಾಗಿದೆ.

ಬಸವಣ್ಣನವರು ಸಮಾಜದಲ್ಲಿ ಭವಿ ಮತ್ತು ಭಕ್ತ ವರ್ಗಗಳನ್ನು ಗುರುತಿಸಿದರು. ಈ ಜಗತ್ತು ಭೋಗವಸ್ತು ಎಂದು ಭಾವಿಸುವವರು ಭವಿಗಳು. ಯಾವುದೇ ಜೀವಿಗೆ ತೊಂದರೆಯಾಗದಂತೆ ಬದುಕುತ್ತ ಕಾಯಕದ ಮೂಲಕ ಈ ಜಗತ್ತಿನ ವಸ್ತುಗಳನ್ನು ಹಿತಮಿತವಾಗಿ ಬಳಸಿಕೊಳ್ಳುತ್ತ ಅನಂತವಾದ ಆಧ್ಯಾತ್ಮಿಕ ಜಗತ್ತಿನ ಕಡೆಗೆ ಸಾಗುವವರು ಭಕ್ತರು.

ಬಸವ ಎಂದರೆ ಒಬ್ಬ ವ್ಯಕ್ತಿ ಅಲ್ಲ; ತ್ರ್ಯಕ್ಷರ ಮಂತ್ರ. ವ್ಯಕ್ತಿ, ಕುಟುಂಬ, ಸಮಾಜ ಮತ್ತು ವಿಶ್ವವನ್ನು ಬೆಸೆಯುವ ಮಂತ್ರ. ಮೇಲು ಕೀಳುಗಳನ್ನು ಹೋಗಲಾಡಿಸುವ ಮಂತ್ರ.

ಬಸವಣ್ಣನವರ ಪರ್ಯಾಯ ಸಮಾಜದಲ್ಲಿ ಮಹಾದೇವ ಭೂಪಾಲ (ಮೋಳಿಗೆ ಮಾರಯ್ಯ)ರಂಥ ಶ್ರೀಮಂತರು ವಸ್ತುಮೋಹದಿಂದ ಹೊರಬರುವರು. ಆಯ್ದಕ್ಕಿ ಲಕ್ಕಮ್ಮರಂಥ ಬಡವರು ವಸ್ತುಮೋಹಕ್ಕೆ ಒಳಗಾಗದೆ ಇರುವರು. ಎಲ್ಲರೂ ಎಲ್ಲ ಅಹಂಕಾರದಿಂದ ಹೊರಬಂದು ಪ್ರೇಮದ ಅತ್ಯುನ್ನತ ಮಟ್ಟವನ್ನು ತಲುಪುವರು. ಎಲ್ಲ ಶರಣರ ವಚನಗಳು ಅಂತರಂಗದ ಬೆಳಕಾಗಿವೆ. ಅನುಭವ ಮಂಟಪದಲ್ಲಿ ಎಲ್ಲರ ಬೆಳಕು ಒಂದಾಗಿ ಹಳೆಯ ಸಮಾಜದ ಒಳಗೆಯೆ ಪರ್ಯಾಯ ಸಮಾಜದ ಉದಯವಾಯಿತು.

## ಬದುಕುವ ಕಲೆ

ನಾವು ಹೇಗೆ ಅಸ್ತಿತ್ವದಲ್ಲಿರಬೇಕು. ಹೇಗೆ ಬದುಕಬೇಕು. ಹೇಗೆ ಮಾತನಾಡಬೇಕು. ಹೇಗೆ ಉಣಬೇಕು. ಹೇಗೆ ಉಡಬೇಕು. ಬದುಕಿಗೆ ಅನಿವಾರ್ಯವಲ್ಲದ ಐಹಿಕ ವಸ್ತುಗಳ ಮೋಹದಿಂದ ಹೇಗೆ ಹೊರಬರಬೇಕು. ಚಿಂತೆಯಿಂದ ಬಿಡಿಸಿಕೊಂಡು ಸಮಸ್ಯೆಗಳನ್ನು ಹೇಗೆ ಎದುರಿಸಬೇಕು. ಸಮಾಜದಲ್ಲಿ ಯಾವ ರೀತಿ ವ್ಯವಹರಿಸಬೇಕು. ದೇಶದ ಕಾನೂನನ್ನು ಯಾವ ರೀತಿ ಗೌರವಿಸಬೇಕು. ಯಾವುದನ್ನು ನರಕ ಎಂದು ತಿರಸ್ಕರಿಸಬೇಕು. ಯಾವುದನ್ನು ಸ್ವರ್ಗ ಎಂದು ಸ್ವೀಕರಿಸಬೇಕು. ಮಾನವ ಏಕತೆಯನ್ನು ಹೇಗೆ ಸಾಧಿಸಬೇಕು. ದ್ವೇಷಾಸೂಯೆಗಳಿಲ್ಲದೆ ಮತ್ತು ರಕ್ತಪಾತವಿಲ್ಲದೆ ನ್ಯಾಯಬದ್ಧವಾದ ಸಮಾಜವನ್ನು ಯಾವರೀತಿ ನಿರ್ಮಾಣ ಮಾಡಬೇಕು. ಅನಿಷ್ಟಗಳ ವಿರುದ್ಧ ಹೇಗೆ ಹೋರಾಡಬೇಕು. ನಮ್ಮೊಳಗೇ ಹೇಗೆ ಜಗಳವಾಡಬೇಕು ಮತ್ತು ನಮ್ಮ ಹೊರಗೆ ಹೇಗೆ ಸೌಹಾರ್ದ

ಸಾಧಿಸಬೇಕು. ನಾವು ಏಕೆ ಗಳಿಸಬೇಕು, ಹೇಗೆ ಗಳಿಸಬೇಕು ಮತ್ತು ಹೇಗೆ ಖರ್ಚು ಮಾಡಬೇಕು. ಪಂಚಮಹಾಭೂತಗಳನ್ನು ಹೇಗೆ ಅರಿತುಕೊಳ್ಳಬೇಕು. ಹೇಗೆ ಸಹಿಸಿಕೊಳ್ಳಬೇಕು. ಆತ್ಮಸ್ತುತಿಯ ಸೆಳೆತದಿಂದ ಹೇಗೆ ಪಾರಾಗಬೇಕು. ಒಳ್ಳೆಯದು ಕಂಡಲ್ಲಿ ಹೇಗೆ ಹೊಗಳಬೇಕು. ಕೆಟ್ಟದ್ದನ್ನು ಹೇಗೆ ತೆಗಳಬೇಕು. ಬದುಕಿನ ಎಲ್ಲ ಏರಿಳಿತಗಳನ್ನು ಹೇಗೆ ಸಹಿಸಿಕೊಳ್ಳಬೇಕು. ನಮ್ಮ ಹೆಂಡಿರು ಮಕ್ಕಳೊಂದಿಗೆ ಮತ್ತು ಸಮಾಜದಲ್ಲಿ ಹೇಗೆ ನಡೆದುಕೊಳ್ಳಬೇಕು. ನಮ್ಮ ಪ್ರವೃತ್ತಿಗಳನ್ನು ಹೇಗೆ ಬಳಸಿಕೊಳ್ಳಬೇಕು. ಯಾವುದು ಸರಿ, ಯಾವುದು ತಪ್ಪು ಎಂಬುದನ್ನು ಹೇಗೆ ನಿರ್ಧರಿಸಬೇಕು. ನಮ್ಮನ್ನು ನಾವು ಹೇಗೆ ವಿಮರ್ಶೆಗೆ ಒಳಪಡಿಸಬೇಕು. ಬೇರೆಯವರನ್ನು ಹೇಗೆ ವಿಮರ್ಶೆ ಮಾಡಬೇಕು. ಯಾವ ರೀತಿ ಸತ್ಯ ನುಡಿಯಬೇಕು. ಯಾವ ರೀತಿ ಪಶ್ಚಾತಾಪ ಪಡಬೇಕು. ಧಾರ್ಮಿಕತೆ ಯಾವುದು, ಧರ್ಮ ಯಾವುದು, ಅಧ್ಯಾತ್ಮ ಯಾವುದು. ಆತ್ಮಪ್ರಜ್ಞೆ ಮತ್ತು ಪರಿಪೂರ್ಣವಾದ ವ್ಯಕ್ತಿತ್ವವನ್ನು ಹೇಗೆ ರೂಪಿಸಿಕೊಳ್ಳಬೇಕು. ಇಷ್ಟಲಿಂಗದ ಮೂಲಕ ಮಾನಸಿಕ ವ್ಯಕ್ತಿತ್ವ ಹೇಗೆ ಬೆಳೆಯುವುದು. ಇಡೀ ಸಮಾಜವೇ ಜಂಗಮಲಿಂಗವೆಂದು ಭಾವಿಸಿ ದಾಸೋಹದ ಮೂಲಕ ಸಾಮಾಜಿಕ ವ್ಯಕ್ತಿತ್ವವನ್ನು ಹೇಗೆ ಪಡೆಯಬೇಕು. ಶಿವಯೋಗದಿಂದ ಮಾನಸಿಕ ವ್ಯಾಯಾಮ, ದಾಸೋಹದಿಂದ ಸಾಮಾಜಿಕ ವ್ಯಾಯಾಮ ಮತ್ತು ಕಾಯಕದಿಂದ ದೈಹಿಕ ವ್ಯಾಯಾಮ ಯಾವ ರೀತಿ ಆಗುವುದು. ಮಾನಸಿಕ ಶಕ್ತಿಯಿಂದ ಯಾವ ರೀತಿಯಲ್ಲಿ ದೈಹಿಕ ಮತ್ತು ಸಾಮಾಜಿಕ ಶಕ್ತಿಗಳನ್ನು ಸದ್ಬಳಕೆ ಮಾಡಿಕೊಳ್ಳುವುದು. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹೇಗೆ ಪಡೆಯುವುದು. ಹೊರಗಿನ ಕ್ರಾಂತಿಯನ್ನು ಸಾಧಿಸುವುದಕ್ಕಾಗಿ ಒಳಗಿನ ಕ್ರಾಂತಿ ಯಾವ ರೀತಿ ನಡೆಯಬೇಕು. ಹಳೆಯ ವ್ಯವಸ್ಥೆಗೆ ವಿಮುಖವಾಗಿ ಮತ್ತು ಪರ್ಯಾಯ ವ್ಯವಸ್ಥೆಯಲ್ಲಿ ಕಾರ್ಯೋನ್ಮುಖವಾಗಿ, ಸೈನಿಕರನ್ನು ಬಳಸದೆ ಮತ್ತು ಪ್ರತ್ಯೇಕ ಹೋರಾಟವನ್ನೂ ಮಾಡದೆ ಪ್ರಜ್ಞಾಪೂರ್ಣವಾದ ಮೌನಕ್ರಾಂತಿಯನ್ನು ಯಾವ ರೀತಿ ಮಾಡಬೇಕು. ತಾನು ತಾನಾಗಿ ನೋಡುವ ಆತ್ಮಮುಖಿ, ತಾನೇ ಸಕಲ ಜೀವಿಗಳಾಗಿ ನೋಡುವ ಜೀವಾತ್ಮಮುಖಿ, ತನ್ನನ್ನು ತಾನು ಸಮೂಹವಾಗಿ ನೋಡುವ ಸಂಗಾತ್ಮಮುಖಿ ಮತ್ತು ತನ್ನನ್ನು ತಾನು ಅನಂತವಾಗಿ ನೋಡುವ ಪರಮಾತ್ಮಮುಖಿ ಹೇಗಾಗಬೇಕು. ಸಕಲಜೀವಾತ್ಮರಿಗೆ ಲೇಸನೆ ಬಯಸುತ್ತ ಹೇಗೆ ವಿಶ್ವಮಾನವರಾಗಿ ರೂಪುಗೊಳ್ಳಬೇಕು ಎಂಬುದನ್ನು ಬಸವಣ್ಣನವರು ನಮಗೆ ಕಲಿಸಿಕೊಟ್ಟರು. ಮಾನಸಿಕ ವ್ಯಕ್ತಿತ್ವ ಆತ್ಮಮುಖಿಯಾಗಿರುತ್ತದೆ. ಭೌತಿಕ ವ್ಯಕ್ತಿತ್ವ ಜೀವಾತ್ಮಮುಖಿಯಾಗಿರುತ್ತದೆ. ಸಾಮಾಜಿಕ ವ್ಯಕ್ತಿತ್ವ ಸಂಗಾತ್ಮಮುಖಿಯಾಗಿರುತ್ತದೆ. ವಿಶ್ವವ್ಯಕ್ತಿತ್ವ ಪರಮಾತ್ಮಮುಖಿಯಾಗಿರುತ್ತದೆ. ಇದೇ ಬಸವಣ್ಣನವರ ಅದ್ವಿತೀಯ ಬದುಕುವ ಕಲೆ. (ಆರ್ಟ್ ಆಫ್ ಲಿವಿಂಗ್)

ಬಸವಣ್ಣನವರ ಪರ್ಯಾಯ ಸಮಾಜ ವಿಶ್ವಕ್ಕೇ ಮಾದರಿಯಾಗಿದೆ. ೧೨ನೇ ಶತಮಾನದ ವಿಶ್ವ ಇಂಥ ಒಂದು ಸಮಾಜ ವ್ಯವಸ್ಥೆಯ ಕನಸನ್ನೂ ಕಂಡಿರಲಿಲ್ಲ. ಬಸವಣ್ಣನವರು ಪರ್ಯಾಯ ಸಮಾಜದ ಕನಸನ್ನು ಕಂಡರು. ವರ್ಗ ಹೋರಾಟದ ಸಿದ್ಧಾಂತದೊಂದಿಗೆ ದೇಶದ ಗಡಿಗಳಿಲ್ಲದ ಮಾನವ ಸಮಾಜ ನಿರ್ಮಾಣವಾಗಬೇಕು ಎಂದು ಕಾರ್ಲ್ ಮಾರ್ಕ್ಸ್ ಹೇಳಿದ್ದು ಇಂಥ ಒಂದು ಸಮಾಜದ ಮುನ್ಸೂಚನೆಯೊಂದಿಗೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

## ಮೌನಕ್ರಾಂತಿಯ ಹರಿಕಾರ

ಕಮ್ಯೂನಿಸ್ಟರ ಹಾಗೆ ಪ್ರತ್ಯಕ್ಷ ವರ್ಗ ಹೋರಾಟ ಮಾಡದೆ, ಹುತಾತ್ಮ ಭಗತಸಿಂಗ್ ಹಾಗೆ ರಾಜ್ಯ ವ್ಯವಸ್ಥೆಯ ವಿರುದ್ಧ ಬಂಡೇಳದೆ, ಅಥವಾ ಮಹಾತ್ಮಾ ಗಾಂಧೀಜಿಯವರ ಹಾಗೆ ಯಾವುದೇ ಅಸಹಕಾರ ಚಳವಳಿಯನ್ನೂ ಹೂಡದೆ ಪರಂಪರಾಗತ ರಾಜ್ಯಶಕ್ತಿ ಮತ್ತು ಸಮಾಜ ವ್ಯವಸ್ಥೆಯ ಬಂಧದ ಒಳಗಡೆಯೆ ಪರ್ಯಾಯ ಸಮಾಜ ವ್ಯವಸ್ಥೆಯನ್ನು ಸುವ್ಯವಸ್ಥಿತವಾಗಿ ರೂಪಿಸುವುದರ ಮೂಲಕ ಅದ್ವಿತೀಯ ಮೌನಕ್ರಾಂತಿಗೆ ನಾಂದಿ ಹಾಡಿದವರು ಬಸವಣ್ಣನವರು. ಅವರ ಕ್ರಾಂತಿಯು ಅಂತಿಮ ಘಟ್ಟ ತಲುಪಿದ್ದರೆ ಬಿಜ್ಜಳನಂಥ ದೊರೆಗಳ ರಾಜ್ಯ ವ್ಯವಸ್ಥೆಯೂ ಮುಂದುವರಿಯುತ್ತಿರಲಿಲ್ಲ; ಜಿಡ್ಡುಗಟ್ಟಿದ ಸಮಾಜ ವ್ಯವಸ್ಥೆಯೂ ಇರುತ್ತಿರಲಿಲ್ಲ.

ಬಸವಣ್ಣನವರು ಪ್ರಧಾನಿಯಾಗಿ ಬಿಜ್ಜಳನ ರಾಜ್ಯಸತ್ತೆಯೊಳಗಿನ ಸಾಂಪ್ರದಾಯಿಕ ಸಮಾಜದ ಮೇಲ್ವಿಚಾರಕರಾಗಿದ್ದರು. ಅದೇ ಸಂದರ್ಭದಲ್ಲಿ ಶರಣಸಂಕುಲದ ಮಾರ್ಗದರ್ಶಿಯಾಗುವುದರ ಮೂಲಕ ನವಸಮಾಜದ ಮುನ್ಸೂಚಕರಾಗಿದ್ದರು. ಅವರ ಪರಿಕಲ್ಪನೆಯ ಪರ್ಯಾಯ ಸಮಾಜ, ನವಸಮಾಜವಾದಾಗ ಇಡೀ ಹಳೆಯ ವ್ಯವಸ್ಥೆ ತಾನೇ ತಾನಾಗಿ ಕರಗಿ ಹೋಗುವುದೆಂಬುದು ಆಳುವ ವರ್ಗದ ಅರಿವಿಗೆ ಬಂದಕೂಡಲೇ ಕಲ್ಯಾಣದಲ್ಲಿ ಶರಣರ ಹತ್ಯಾಕಾಂಡವಾಯಿತು. ಕೆಳಜಾತಿಯ ಮಹಾಜ್ಞಾನಿ ಅಲ್ಲಮಪ್ರಭುಗಳು ಶೂನ್ಯಸಿಂಹಾಸನವೇರಿದಾಗಲೆ ಕಲ್ಯಾಣದ ಪಟ್ಟಭದ್ರರಿಗೆ, ಎಲ್ಲ ದೃಷ್ಟಿಯಿಂದಲೂ ಸಮೃದ್ಧವಾಗಿರುವ ತಮ್ಮ ನೆಲೆ ಕುಸಿಯುತ್ತಿರುವ ಅರಿವಾಯಿತು. ಸಮಗಾರ ಹರಳಯ್ಯ ಮತ್ತು ಬ್ರಾಹ್ಮಣ ಮಧುವರಸರು ಬಸವಣ್ಣನವರ ಪರ್ಯಾಯ ಸಮಾಜದಲ್ಲಿ ಜಾತಿ ಸಂಕರಗೊಂಡು ಕೇವಲ ಶರಣರಾಗಿದ್ದರು. ಅವರ ಮಕ್ಕಳ ಮದುವೆ ಸಾಂಪ್ರದಾಯಿಕ ಸಮಾಜದವರಿಗೆ ಅಂತರ್ಜಾತೀಯ ವಿವಾಹವಾಗಿ ಕಂಡಿತು. ಅದನ್ನೇ ನೆಪ ಮಾಡಿಕೊಂಡ ಯಥಾಸ್ಥಿತಿವಾದಿಗಳು ಶರಣರ ಹತ್ಯೆ ಮಾಡಿದರು. ಶರಣರ ಹತ್ಯಾಕಾಂಡ ಮಧ್ಯಯುಗದ ಇತಿಹಾಸದಲ್ಲಿ ದಾಖಲೆಯಾಗದೆ ಹೋದುದು ಮಾನವೀಯತೆಗೆ

ಮಾಡಿದ ಅವಮಾನವಾಗಿದೆ. ಈ ಹತ್ಯಾಕಾಂಡವನ್ನು 'ಕಲ್ಯಾಣ ಕ್ರಾಂತಿ' ಎಂದು ರಮ್ಯವಾಗಿ ಕರೆಯುವುದರ ಮೂಲಕ ತೃಪ್ತಿ ಪಡುವುದರ ಬದಲು, ಮಾನವಕುಲದ ಈ ಮಹತ್ವದ ಘಟನೆ ಇತಿಹಾಸದಲ್ಲಿ ದಾಖಲಾಗದೆ ಇರಲು ಕಾರಣಗಳೇನು? ಸುಲಿಗೆ ವ್ಯವಸ್ಥೆಯ ಪ್ರತಿಪಾದಕರು ಈ ಘಟನೆ ತನ್ನ ನೈಜರೂಪದಲ್ಲಿ ದಾಖಲಾಗದಂತೆ ನೋಡಿಕೊಳ್ಳುವಲ್ಲಿ ಅದು ಹೇಗೆ ಯಶಸ್ಸು ಸಾಧಿಸಿದರು ಎಂಬುದನ್ನು ಕಂಡುಕೊಳ್ಳುವುದು ಸಕಲಜೀವಿಗಳ ಬಗ್ಗೆ ಗೌರವವಿರುವ ಸಂಶೋಧಕರ ಆದ್ಯ ಕರ್ತವ್ಯವಾಗಿದೆ.

ಅಲ್ಲಮಪ್ರಭುಗಳು ಕೊಂಡಾಡಿದಂತೆ ಬಸವಣ್ಣನವರು ಯುಗದ ಉತ್ಸಾಹ ವಾಗಿದ್ದರು. ಉನ್ನತ ಪ್ರಜ್ಞೆಯ ಪ್ರತೀಕವಾಗಿದ್ದರು. 'ಕರ್ಣದಲಿ ಜನಿಸಿದವರುಂಟೆ ಜಗದೊಳು' ಎಂದು ಹೇಳುವ ವೈಜ್ಞಾನಿಕ ಮನೋಭಾವದವರಾಗಿದ್ದರು. 'ಕೂಡಲ ಸಂಗಮದೇವರ ಮನಮುಟ್ಟಿ ಪೂಜಿಸಿ ಕರ್ಮ ಹರಿಯದೊಡಾ ಪೂಜೆಯದೇಕೊ' ಎಂದು ಅವರು ಕರ್ಮಸಿದ್ಧಾಂತವನ್ನು ಅಲ್ಲಗಳೆದರು. 'ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ, ಕೂಡಲಸಂಗಮದೇವಾ ಜಂಗಮಕ್ಕೆರೆದಡೆ ಸ್ಥಾವರ ನನೆಯಿತ್ತು' ಎಂದು ಹೇಳುವುದರ ಮೂಲಕ ಜಗದ ಸೇವೆಯೆ ಜಗದೀಶನಿಗೆ ಮಾಡುವ ಪೂಜೆ ಎಂಬ ಅರಿವು ಮೂಡಿಸಿದರು. 'ಲೋಕವಿರೋಧಿ ಶರಣನಾರಿಗಂಜುವವನಲ್ಲ' ಎಂದು ಮೇಲು ಕೀಳುಗಳಿಂದ ತುಂಬಿ ತುಳುಕುತ್ತಿದ್ದ ಸಮಾಜಕ್ಕೆ ಸ್ಪಷ್ಟಪಡಿಸಿದರು. 'ಕುಲವನರಸುವರೆ ಶರಣರಲಿ ಜಾತಿಸಂಕರವಾದ ಬಳಿಕ?' ಎಂದು ಪ್ರಶ್ನಿಸುವುದರ ಮೂಲಕ ಪರ್ಯಾಯ ಸಮಾಜದ ಅಡಿಪಾಯ ಹಾಕಿದರು. 'ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗನ ಶರಣರೆ ಕುಲಜರು' ಎಂದು ಎದೆತಟ್ಟಿ ಹೇಳಿದರು. 'ಹಡೆದೊಡವೆ ವಸ್ತುವನು ಮೃಡಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು' ಎಂದು ಪರ್ಯಾಯ ಸಮಾಜದ ಸದಸ್ಯರಿಗೆ ಆದೇಶಿಸುವ ಮೂಲಕ ಬಡ್ಡಿಯ ಕ್ರೌರ್ಯದ ವಿರಾಟ್ ಸ್ವರೂಪದ ಅರಿವು ತಮಗಿದೆ ಎಂದು ತೋರಿಸಿಕೊಟ್ಟರು. 'ವೇದ ಶಾಸ್ತ್ರ ಆಗಮಂಗಳನೋದಿದವರು ಹಿರಿಯರೆ? ನಟನಿ ಬಾಣ ವಿಲಾಸಿ ಸುವಿದ್ಯವ ಕಲಿತ ಡೊಂಬನೇನು ಕಿರಿಯನೆ? ಎಂದು ಹೇಳುವುದರ ಮೂಲಕ ಮೇಲ್ಜಾತಿ ಮೇಲ್ವರ್ಗದವರ ಪ್ರತಿಭೆಗಿಂತ ಕೆಳಜಾತಿ, ಕೆಳವರ್ಗದವರ ಪ್ರತಿಭೆ ಕಡಿಮೆಯೇನಿಲ್ಲ ಎಂದು ವಾದಿಸಿದರು. 'ಕಳ್ಳನಾಣ್ಯ ಸಲುಗೆಗೆ ಸಲ್ಲದು' ಎಂದು ಹೇಳುವುದರ ಮೂಲಕ, ಒಂದು ವ್ಯವಸ್ಥೆಯಲ್ಲಿ ಇದ್ದಾಗ ಅದರ ಕಟ್ಟಳೆಗಳನ್ನು ಪಾಲಿಸಬೇಕು ಎಂಬುದನ್ನು ಸೂಚಿಸಿದರು. 'ವೇದಕ್ಕೆ ಒರೆಯ ಕಟ್ಟುವೆ ಶಾಸ್ತ್ರಕ್ಕೆ ನಿಗಳವನಿಕ್ಕುವೆ' ಎಂದು ಹಳೆಯದರಲ್ಲಿನ ಅಸಂಬದ್ಧತೆಯನ್ನು ಪ್ರಶ್ನಿಸಿದರು. ಅವರು ತಮ್ಮನ್ನು ಅಕ್ರಮ ಸಂತಾನದ ಪ್ರತೀಕವಾಗಿ ನೋಡಿಕೊಳ್ಳುವುದರ ಮೂಲಕ

ಹೊಲೆಮಾದಿಗರಿಗೂ ಕಡೆಯಾಗಿ ನಿಂತು ಹುಟ್ಟಿನ ಮೂಲದ ಒಣ ಅಹಂಭಾವವನ್ನು ಅಲ್ಲಗಳೆದರು. 'ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ ಕೂಡಲಸಂಗಮದೇವಾ' ಎಂದು ಹೇಳಿ ನರನ ಸಂಗ್ರಹಬುದ್ಧಿಯ ಹಿಂದಿರುವ ಸಾಮಾಜಿಕ ಕ್ರೌರ್ಯವನ್ನು ತೋರಿಸಿಕೊಟ್ಟರು. 'ನಿನ್ನ ನಾನರಿಯದ ಮುನ್ನ ನೀನೆಲ್ಲಿ ಇದ್ದೆ? ಎನ್ನೊಳಗಿದ್ದು ನಿನ್ನ ತೋರಲಿಕ್ಕೆ ನೀನೇ ರೂಪಾದೆ' ಎಂದು ಅಂತಃಸಾಕ್ಷಿಯನ್ನೇ ದೇವರೆಂದು ಸೂಚಿಸಿದರು. ಇಷ್ಟಲಿಂಗವನ್ನು ಅಂತಃಸಾಕ್ಷಿಯ ಪ್ರತೀಕವಾಗಿ ಕಂಡರು. ಇಡೀ ವಿಶ್ವವನ್ನು ಜಂಗಮಲಿಂಗದ ರೂಪದಲ್ಲಿ ನೋಡಿದರು. ಹೀಗಾಗಿ ಬಸವಣ್ಣನವರಿಗೆ ಯಾರೂ ಹೊರಗಿನವರಾಗಲಿಲ್ಲ. 'ಕೈಲಾಸವೆಂಬುದೇನೋ ಪೃಥ್ವಿಯ ಮೇಲೊಂದು ಮೊರಡಿ' ಎಂದು ಅವರು ಸ್ವರ್ಗದ ಭ್ರಮೆಯನ್ನು ಕಳೆಯುವುದರ ಜೊತೆಗೆ ಭೂಮಿಯ ಮಹತ್ವದ ಮನವರಿಕೆ ಮಾಡಿಕೊಟ್ಟರು.

ಇಂಥ ಒಬ್ಬ ಮಹಾನುಭಾವ ಕನ್ನಡದ ನೆಲದಲ್ಲಿ ಆಗಿಹೋದದ್ದು ನಮ್ಮ ಅಂತಃಕರಣದ ಆಳಕ್ಕೆ ಇಳಿಯುತ್ತಲೇ ಇಲ್ಲ ಎಂದೆನಿಸುತ್ತದೆ. ಏಕೆಂದರೆ ನಮ್ಮ ದೇಶ ಮತ್ತು ಜಗತ್ತು ಇಷ್ಟೊಂದು ಅಧೋಗತಿಗೆ ಇಳಿಯುತ್ತಿದ್ದರೂ ಮಾನವಕುಲದ ರಕ್ಷಣೆಗಾಗಿ ಬಸವ ಎಂಬ ತ್ರ್ಯಕ್ಷರ ಮಂತ್ರವನ್ನು ನಾವೇಕೆ ಉಚ್ಚರಿಸುತ್ತಿಲ್ಲ?

ಬಸವಣ್ಣನವರ ಪರ್ಯಾಯ ಸಮಾಜ ಎಂಥ ರೂಪುರೇಷೆಗಳನ್ನು ಹೊಂದಿತ್ತು? ಇಂದಿನ ವರ್ತಮಾನದ ಬದುಕನ್ನು ಹಸನುಗೊಳಿಸಲು ಬಸವಣ್ಣನವರ ವಿಚಾರಧಾರೆಯನ್ನು ಹೇಗೆ ಬಳಸಿಕೊಳ್ಳಬೇಕು? ಎಂಬುದನ್ನು ತಿಳಿದುಕೊಳ್ಳುವುದು ಹಿಂದೆಂದಿಗಿಂತಲೂ ಇಂದು ಹೆಚ್ಚು ಅವಶ್ಯವಾಗಿದೆ.

'ಬಸವ ರಾಜ್ಯದ ಸಿರಿಯು, ಬಸವ ಬಡವರ ನಿಧಿಯು' ಎಂದು ಜನಪದ ಕವಿಯೊಬ್ಬ ಮನದುಂಬಿ ಹಾಡಿದ್ದಾನೆ. ಈ ಹೊಗಳಿಕೆ ಎಷ್ಟೊಂದು ಅರ್ಥಗರ್ಭಿತವಾಗಿದೆ! ಬಸವಣ್ಣನವರು ಅರ್ಥ ಸಚಿವರಾಗಿ ಪ್ರಧಾನಿಯಾಗಿ ಕರ್ತವ್ಯಚ್ಯುತರಾಗದೆ ಬಿಜ್ಜಳನ ಭಂಡಾರ ತುಂಬಿತುಳುಕುವಂತೆ ಮಾಡಿದ್ದಾರೆ. ಕಾಯಕದ ಮೂಲಕ ಮಾನವ ಶಕ್ತಿಯ ಪ್ರಜ್ಞೆ ಮೂಡಿಸಿ ಜನಕೋಟಿಯ ಮೈಮನಗಳು ಆರೋಗ್ಯಪೂರ್ಣವಾಗಿರುವಂತೆ ನೋಡಿಕೊಂಡಿದ್ದಾರೆ. ಬಸವಣ್ಣನವರ ಪರ್ಯಾಯ ಸಮಾಜ ವ್ಯವಸ್ಥೆಯಲ್ಲಿ ಮೇಲು ಕೀಳುಗಳಿಲ್ಲ. ವರ್ಗ, ವರ್ಣ, ಜಾತಿ ಮತ್ತು ಲಿಂಗಭೇದಗಳಿಲ್ಲ. ಕೊಡುವವರುಂಟು, ಬೇಡುವವರಿಲ್ಲ. ಆತ್ಮಗೌರವವುಂಟು ಅಹಂಕಾರವಿಲ್ಲ. ಅನುಭವದ ಮೂಲಕ ಅನುಭಾವ

ವುಂಟು ಹೊರತಾಗಿ, ದುಡಿಯದೆ ಧ್ಯಾನಿಸುವ ಮೂಲಕ ಬರುವ ಅನುಭಾವವಲ್ಲ. ಕಾಯಕವೆಂಬುದು ಬಸವಣ್ಣನವರ ಪರ್ಯಾಯ ಸಮಾಜದ ಆಧಾರಸ್ತಂಭವಾಗಿದೆ. ಈ ಕಾಯಕಕ್ಕೆ ದಾಸೋಹದ ಜವಾಬ್ದಾರಿ ಇದೆ. ದಾಸೋಹ ಪ್ರಜ್ಞೆಯಿಲ್ಲದ ಕಾಯಕ ಕೂಡ ಹೊಸ ಸಮಾಜದ ಸೃಷ್ಟಿಗೆ ಸಹಾಯಕವಾಗದು. ದಾಸೋಹವಿಲ್ಲದ ಕಾಯಕ ಕೇವಲ ಕೆಲಸ ಎಂದು ಕರೆಯಿಸಿಕೊಳ್ಳುವುದು. ದಾಸೋಹವು ಮಿಗುತಾಯ ಮೌಲ್ಯ ಸೃಷ್ಟಿಯಾಗದಂತೆ ನೋಡಿಕೊಳ್ಳುತ್ತದೆ. ಬಡ್ಡಿ ವ್ಯವಹಾರಕ್ಕೆ ಕಡಿವಾಣ ಹಾಕುತ್ತದೆ. ಆದರೆ ಸಂಪತ್ತಿನ ಸಂಗ್ರಹಣೆ ಮತ್ತು ಬಡ್ಡಿ ವ್ಯವಹಾರದ ಮೇಲೆ ಇಂದಿನ ಜಗತ್ತು ನಿಂತಿದೆ. ಸಂಪತ್ತಿನ ಶೇಖರಣೆ ಮತ್ತು ವಿಸ್ತೀರ್ಣ ಮಾಡುವವರಿಗೆ ಯಾವುದೇ ಮೌಲ್ಯಗಳಿಲ್ಲ. ಯಾವುದೇ ನಾಚಿಕೆ ಇಲ್ಲ. ಅವರಿಗೆ ಹಣವೇ ಮೌಲ್ಯ. ಅದಕ್ಕಾಗಿ ಅವರು ಯಾವುದೇ ದೇಶದ ಮೇಲೆ ಯುದ್ಧ ಮಾಡಬಲ್ಲರು. ಲಕ್ಷಾಂತರ ತಾಯಂದಿರು ಮತ್ತು ಮಕ್ಕಳನ್ನು ಕೊಲ್ಲಬಲ್ಲರು. ಮಾನವನ ಪ್ರತಿಭೆ, ನಾಗರೀಕತೆ ಮತ್ತು ಪರಂಪರೆಯ ಪ್ರತೀಕವಾದ ಪುರಾತನ ಕಲಾತ್ಮಕ ಸ್ಮಾರಕಗಳನ್ನು ಧ್ವಂಸ ಮಾಡಬಲ್ಲರು. ಧರ್ಮಗಳ ದುರ್ಬಳಕೆಗೆ ಮುಂದಾಗಬಲ್ಲರು. ಧರ್ಮದ ಹೆಸರಿನಲ್ಲಿ ಕೋಮುಗಲಭೆ ಸೃಷ್ಟಿಸಬಲ್ಲರು. ಹೀಗೆ ಸಾಗುತ್ತ ಇಂದು ನಾವು ಯಾವ ಮಟ್ಟವನ್ನು ತಲುಪಿದ್ದೇವೆ ಎಂದರೆ ವಿಶ್ವದಲ್ಲಿ ಇಂದು ೩೫ ಸಾವಿರ ಪರಮಾಣು ಅಸ್ತ್ರಗಳಿವೆ. ಒಂದು ಪರಮಾಣು ಅಸ್ತ್ರ ಕ್ಷಣಾರ್ಧದಲ್ಲಿ ಸೃಷ್ಟಿಸುವ ಶಾಖ, ವಿಶ್ವದ ಇತಿಹಾಸದಲ್ಲಿ ಸಾಂಪ್ರದಾಯಿಕ ಅಸ್ತ್ರಗಳು ಸೃಷ್ಟಿಸಿದ ಒಟ್ಟು ಶಾಖಕ್ಕಿಂತ ಹೆಚ್ಚಿಗೆ ಇರುವುದು! ಇಂಥ ಇನ್ನೂ ೨,೧೦,೦೦೦ ಪರಮಾಣು ಅಸ್ತ್ರಗಳನ್ನು ತಯಾರಿಸುವಷ್ಟು ಸಂಪನ್ಮೂಲಗಳನ್ನು ಅಮೆರಿಕದಂಥ ಶ್ರೀಮಂತ ರಾಷ್ಟ್ರಗಳು ತಯಾರಿಸಿಟ್ಟಿವೆ. ಇದಲ್ಲದೆ ವಿಶ್ವದ ೬೪ ದೇಶಗಳಲ್ಲಿ ನೆಲಬಾಂಬುಗಳನ್ನು ಹುಗಿದಿಡಲಾಗಿದೆ. ಇದರಿಂದ ಪ್ರತಿವರ್ಷ ೨೫ ಸಾವಿರಕ್ಕೂ ಹೆಚ್ಚುಮಂದಿ ಸಾಯುತ್ತಾರೆ. ಅಷ್ಟೇ ಪ್ರಮಾಣದ ಜನ ಅಂಗವಿಕಲರಾಗುತ್ತಾರೆ. ಹೀಗೆ ನಾವು ಬೆಳೆಯ ಭೂಮಿಯಲ್ಲಿ ಪ್ರಳಯದ ಕಸ ತುಂಬಿದ್ದೇವೆ.

ಅಹಂಕಾರ ಅಳಿಸಿ ಸಮರ್ಪಣಾ ಭಾವ ಬೆಳೆಸುವುದು, ವೈಯಕ್ತಿಕವಾದುದನ್ನು ಸಾರ್ವತ್ರಿಕಗೊಳಿಸುವುದು ಬಸವಾದ್ವೈತ. ಅವುಗಳಲ್ಲಿ ಅಭೇದ್ಯ ಕಲ್ಪಿಸುವುದು. ಕನಿಷ್ಠ ಅವಶ್ಯಕತೆಗಳ ಜೊತೆ ಬದುಕುವುದು. ಸರಳ ಬದುಕಿಗೆ ವಿರುದ್ಧವಾದ ವಸ್ತುಗಳನ್ನು ತ್ಯಜಿಸುವುದು. ದೇಹ ಮತ್ತು ಮನಸ್ಸಿಗೆ ಒಳ್ಳೆಯದಲ್ಲದ ಹವ್ಯಾಸಗಳಿಂದ ಹೊರಬರುವುದು ಬಸವಣ್ಣನವರ ಪರ್ಯಾಯ ಸಮಾಜ ನಿರ್ಮಾಣಕ್ಕೆ ಅವಶ್ಯವಾಗಿದೆ.

ಪ್ರಜ್ಞಾ ಪ್ರಧಾನ ಸಮಾಜ...

ಬಸವಣ್ಣನವರ ಪ್ರಜ್ಞಾ ಪ್ರಧಾನ ಸಮಾಜದಲ್ಲಿ ಭವಿಯೂ ಭಕ್ತನಾಗುತ್ತಾನೆ. ಐಹಿಕ ಬದುಕಿಗೆ ಆತ್ಮಜ್ಞಾನದ ಧಾರೆ ಎರೆಯುತ್ತಾನೆ. ಮಾನಸಿಕವಾಗಿ ಇಡೀ ಸಮೂಹವೇ ತಾನಾಗುತ್ತಾನೆ. ಜಾತಿ ಮನೆಯಿಂದ ಮಹಾಮನೆಗೆ ಸಾಗುತ್ತಾನೆ. ಬಹುದೇವತೆಗಳನ್ನು ತೊರೆದು ಏಕದೇವೋಪಾಸಕನಾಗುತ್ತಾನೆ. ಸ್ಥಾವರಲಿಂಗದಿಂದ ಇಷ್ಟಲಿಂಗಕ್ಕೆ ಹೊರಳುತ್ತಾನೆ. ಹೆಂಡಿರು ಮಕ್ಕಳುಳ್ಳ ಶಿವನ ಸ್ಥಾನದಲ್ಲಿ ಅನಾದಿ, ಅನಂತ, ನಿರಾಕಾರ ಶಿವನ ಸ್ಥಾಪನೆ ಮಾಡುತ್ತಾನೆ. ಮಂದಿರಗಳನ್ನು ತೊರೆದು ಅನುಭವ ಮಂಟಪಕ್ಕೆ ಬರುತ್ತಾನೆ. ಕರ್ಮ ಸಿದ್ಧಾಂತ ಅಲ್ಲಗಳೆದು ಕಾಯಕ ಸಿದ್ಧಾಂತವನ್ನು ಸ್ವೀಕರಿಸುತ್ತಾನೆ. ದಾನಿ ಎನಿಸಿಕೊಳ್ಳುವ ಬದಲು ದಾಸೋಹಿ ಎನಿಸಿಕೊಳ್ಳುತ್ತಾನೆ. ರಾಜಪ್ರಭುತ್ವದ ಉಸಿರುಗಟ್ಟುವ ವಾತಾವರಣದಿಂದ ಹೊರಬಂದು ಪ್ರಜಾಪ್ರಭುತ್ವದ ಬಯಲಿನ ಕಡೆಗೆ ಸಾಗುತ್ತಾನೆ. ಒಳಗೆ ಸ್ಥಿತಪ್ರಜ್ಞನಾಗಿಯೂ ಹೊರಗೆ ಸ್ಥಿತಿಪ್ರಜ್ಞನಾಗಿಯೂ ಇರುತ್ತಾನೆ. ನಂಬಿಕೆ ಪ್ರಧಾನ ಸಮಾಜದಿಂದ ಪ್ರಜ್ಞಾ ಪ್ರಧಾನ ಸಮಾಜಕ್ಕೆ ಬಂದ ಕಾರಣ ಮಾತಿಲ್ಲದ ಸಮುದಾಯದ ಮಾತಾಗುತ್ತಾನೆ.

ಪರಿಪೂರ್ಣವಾಗಿ ಅಸಮಾನತೆಯ ವಿರೋಧಿಯಾಗಬೇಕೆ? ಕಾರ್ಮಿಕರು, ದಲಿತರು, ಮಹಿಳೆಯರು ಮತ್ತು ಮಕ್ಕಳ ಪರ ಆಗಬೇಕೆ? ಬಸವಮಾರ್ಗದಲ್ಲಿ ಮುನ್ನಡೆಯಿರಿ.

ಅಹಂಕಾರದಿಂದ ವಿಶ್ವ ನಾಶ. ದಯೆಯಿಂದ ವಿಶ್ವ ರಕ್ಷಣೆ. ಇದೇ ಬಸವಣ್ಣನವರು ಸಾರಿದ ಸತ್ಯ.

●

# ವಿಮೋಚನಾ ಪ್ರಕಾಶನದ ಗ್ರಂಥಗಳು

| ಅ.ಸಂ. | ಹೆಸರು | ಲೇಖಕರು | ವರ್ಷ |
|---|---|---|---|
| ೧. | ವಿಮೋಚನೆ ವಿವೇಚನೆ | ವ್ಹಿ.ಎಸ್. ಮನವಾಡೆ | ೧೯೮೫ |
| ೨. | ವಿಮೋಚನಾ ಜ್ಯೋತಿ | ಸಂ. ವ್ಹಿ.ಎಸ್. ಮನವಾಡೆ | ೧೯೮೭ |
| *೩. | ಮುಳ್ಳುದಾರಿಯಲ್ಲಿ ಬಿರಿದ ಹೂಗಳು | ದು.ನಿಂ. ಬೆಳಗಲಿ | ೧೯೮೯,೧೯೯೭ |
| ೪. | ದೇವದಾಸಿ ಪದ್ಧತಿ ವಿಮೋಚನೆ ಹಾಗೂ ಬಸವಣ್ಣನವರು | ಕಲ್ಯಾಣಮ್ಮ ಲಂಗೋಟಿ | ೧೯೮೯ |
| ೫. | ಬಿನ್ನವತ್ತಳೆ ಮತ್ತು ಲಕ್ಷ್ಮಣ ಬಳ್ಳೊಳ್ಳಿ | ವ್ಹಿ.ಎಸ್. ಮನವಾಡೆ | ೧೯೮೯ |
| ೬. | ಯುಗ ಪ್ರವರ್ತಕ (ಮರು ಮುದ್ರಣ) | ಹಳೇಪೇಟೆ ಚಿಂತಾಮಣಿ | ೧೯೮೯ |
| ೭ | ಸಾರ್ಥಕ ಸೇವೆಯ ಐದು ವರುಷಗಳು | ವ್ಹಿ.ಎಸ್. ಮನವಾಡೆ | ೧೯೯೦ |
| ೮. | ಶರಣ ಪ್ರಕಾಶ | ಸಂ. ವ್ಹಿ.ಎಸ್. ಮನವಾಡೆ | ೧೯೯೦ |
| ೯. | ಕತ್ತಲೆ ಕಳೆದ ಬೆಳಕು | ಕೆ.ಎಲ್. ಕುಂದರಗಿ ಮತ್ತು ಜಿ.ಎಚ್. ಹನ್ನೆರಡುಮಠ | ೧೯೯೧ |
| *೧೦. | ದೇವದಾಸಿ | ದು.ನಿಂ. ಬೆಳಗಲಿ | ೧೯೯೧ |
| *೧೧. | ಸುಯೋಗ | ಈಶ್ವರ ಕಾಪಸೆ | ೧೯೯೨ |
| ೧೨. | ಹರಕೆಯ ಹೆಣ್ಣು | ಡಾ. ಕೆ.ಜಿ. ಗುರುಮೂರ್ತಿ | ೧೯೯೨ |
| ೧೩. | ಸೂರ್ಯ ನಮಸ್ಕಾರ | ಈಶ್ವರ ಕಾಪಸೆ | ೧೯೯೩ |
| ೧೪. | ದೇವದಾಸಿ ಸಂಪ್ರದಾಯ | ಡಾ. ಜೋಗನ್ ಶಂಕರ | ೧೯೯೩ |
| ೧೫. | ಶಿವಶರಣರ ದೃಷ್ಟಿಯಲ್ಲಿ ಸ್ತ್ರೀ | ಎಸ್.ವಾಯ್. ಹಂಜಿ | ೧೯೯೩ |
| ೧೬. | ಸಲಿಂ ಚಾಚಾ | ಜಯವಂತ ಕಾಡದೇವರ | ೧೯೯೪ |
| ೧೭. | ಪದ್ಮಶ್ರೀ ರತ್ನಪ್ಪಣ್ಣ ಕುಂಬಾರ | ಲಕ್ಷ್ಮಣ ಬಳ್ಳೊಳ್ಳಿ | ೧೯೯೪ |
| ೧೮. | ಮಕ್ಕಳಿಗಾಗಿ ಡಾ. ಬಿ.ಆರ್. ಅಂಬೇಡಕರ | ಜಯವಂತ ಕಾಡದೇವರ | ೧೯೯೫ |
| *೧೯. | ಶರಣರ ಆಂದೋಲನ ಹಾಗೂ ಹೊಸ ಸಮಾಜದ ಪರಿಕಲ್ಪನೆ | ಡಾ. ಎಂ.ಬಿ. ಹೂಗಾರ | ೧೯೯೫ |
| ೨೦. | ದೇವದಾಸಿ : ಒಂದು ಅವಲೋಕನ | ಸಂ. ವ್ಹಿ.ಎಸ್. ಮನವಾಡೆ | ೧೯೯೬ |
| ೨೧. | ಕನ್ನಡ-ಮರಾಠಿ ದಲಿತ ಸಾಹಿತ್ಯ | ಡಾ. ಸರಜೂ ಕಾಟ್ಕರ | ೧೯೯೬ |
| *೨೨. | ಉದರೋಪನಿಷತ್ | ಮಲ್ಲಿಕಾರ್ಜುನ ಹುಲಗಬಾಳಿ | ೧೯೯೬ |
| *೨೩. | ಧರ್ಮ ಮತ್ತು ರಾಜಕೀಯ | ಡಾ. ಜಿ.ಕೆ. ಗುರುಮೂರ್ತಿ | ೧೯೯೬ |
| ೨೪. | ಮತ್ತೊಂದು ಮುಖ | ಜಿ.ಎಸ್. ವಡಗಾಂವಿ | ೧೯೯೬ |

| | | | |
|---|---|---|---|
| ೨೫. | ಬುದ್ಧ ಮತ್ತು ಅವನ ಧರ್ಮ | ಎನ್.ಕೆ. ನಾಗರಾಜು | ೧೯೯೭ |
| ೨೬. | ಸಿ.ಎಸ್. ಗೋಜೇರ : ಅಪೂರ್ವ ೬೦ | ಡಾ. ಪಿ.ಎಸ್. ಮಯ್ಯ | ೧೯೯೭ |
| ೨೭. | ಎದೆ ಹಾಲು | ಈಶ್ವರ ಕಾಪಸೆ | ೧೯೯೭ |
| ೨೮. | ಶಿವಶರಣೆ ಸೂಳೆ ಸಂಕವ್ವೆ | ಲಿಂಗಣ್ಣ ಸತ್ಯಂಪೇಟ | ೧೯೯೮ |
| ೨೯. | ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ | ಡಾ. ಕಮಲಾ ಹೆಮ್ಮಿಗೆ | ೧೯೯೮ |
| *೩೦. | ಹೂಬುಟ್ಟಿ | ವರ್ಷಾ ಹೂಗಾರ | ೧೯೯೮ |
| ೩೧. | ಬದುಕಲು ಇದೊಂದೇ ದಾರಿ | ಕೆ.ಬಿ. ಫಡಕೆ | ೧೯೯೮ |
| ೩೨. | ಬೆಳಗಲಿ ಮತ್ತು ಇತರರು | ಡಾ. ಜಿ.ಎಸ್. ಕಾಪಸೆ | ೧೯೯೮ |
| ೩೩. | ಉತ್ತರ ಕರ್ನಾಟಕದ ಜಾನಪದ ಗೀತಮೇಳಗಳು | ಡಾ. ವೀರೇಶ ಬಡಿಗೇರ | ೧೯೯೯ |
| ೩೪. | ಮುತ್ತು ಕಟ್ಟಲಿಲ್ಲ ಮುತ್ತೈದೆಯಾದಳು | ಲಕ್ಷ್ಮಣ ನಾಗನೂರ | ೧೯೯೯ |
| ೩೫. | ನಾ ನಗಂದ್ರ ಹ್ಯಾಂಗ ನಗಲಿ | ಬಿ.ಆರ್. ಕಾಮಗೋಳ | ೧೯೯೯ |
| ೩೬. | ಅಟಲ ಬಿಹಾರಿ ವಾಜಪೇಯಿ ಕವಿತೆಗಳು | ಡಾ. ಸರಜೂ ಕಾಟ್ಕರ | ೧೯೯೯ |
| ೩೭. | ಆಯುರ್ವೇದ ಕೈಪಿಡಿ | ಡಿ.ಬಿ. ಕೊಡಬಾಗಿ | ೧೯೯೯ |
| ೩೮. | ದಲಿತರ ಬದುಕು ಮತ್ತು ಸಂಸ್ಕೃತಿ : ಜಾನಪದೀಯ ಅಧ್ಯಯನ | ಡಾ. ಅರ್ಜುನ ಗೊಳಸಂಗಿ | ೨೦೦೦ |
| ೩೯. | ವೆನ್ ಥೊರ್ನ್ಸ್ ಬ್ಲಾಸಮ್ಡ್ | ಡಾ. ವ್ಹಿ.ಟಿ. ನಾಯಕ | ೨೦೦೦ |
| ೪೦. | ಸಂಪ್ರದಾಯದ ಸುಳಿಯಲ್ಲಿ | ಪೂಜ್ಯ ಚೆನ್ನಬಸವದೇವರು | ೨೦೦೦ |
| ೪೧. | ಅಂತರಾಳ | ಸಿ.ಎ. ಇಟ್ನಾಳಮಠ | ೨೦೦೧ |
| ೪೨. | ಹೆಜ್ಜೆಗಳು | ಸಂ. ಸಿ.ಎ. ಇಟ್ನಾಳಮಠ | ೨೦೦೧ |
| *೪೩. | ದೇಹಕ್ಕೊಂದು ಪ್ರದಕ್ಷಿಣೆ | ಡಾ. ವಸಂತ ಕುಲಕರ್ಣಿ | ೨೦೦೧ |
| ೪೪. | ಬಾನಂಗಳ | ವರ್ಷಾ ಹೂಗಾರ | ೨೦೦೨ |
| ೪೫. | ಸಂಚಾರಿ | ಬಿ.ಎ. ಸನದಿ | ೨೦೦೨ |
| ೪೬. | ಆಹ್ವಾನ | ಶ್ರೀನಿವಾಸ ಕುಲಕರ್ಣಿ | ೨೦೦೨ |
| ೪೭. | ದೇವರಾಯ | ಡಾ. ಸರಜೂ ಕಾಟ್ಕರ | ೨೦೦೨ |
| ೪೮. | ಹೆಜ್ಜೆ | ಲತಾ ಗುತ್ತಿ | ೨೦೦೪ |
| ೪೯. | ಪ್ರಯೋಜನೆ-ಸುಸ್ಥಿರ ಅಭಿವೃದ್ಧಿಯೆಡೆಗೆ | ಸುಭಾಷ ಚಿಟಗುಪಕರ | ೨೦೦೪ |
| ೫೦. | ರಿಲಿಜನ್ ಆ್ಯಂಡ್ ಪಾಲಿಟಿಕ್ಸ್ | ಡಾ. ಎ.ಎ. ಮುತಲಿಕದೇಸಾಯಿ | ೨೦೦೫ |
| ೫೧. | ಶ್ರೀಸಂತರಾಮ ವಿಜಯಂ | ವ್ಹಿ.ಎಸ್. ಮನವಾಡೆ | ೨೦೦೫ |

| | | |
|---|---|---|
| ೫೨. ಕಾಪಾಡು ಕೂಡಲಸಂಗಮ ದೇವಾ | ದು.ನಿಂ. ಬೆಳಗಲಿ | ೨೦೦೬ |
| ೫೩. ದು.ನಿಂ. ಬೆಳಗಲಿಯವರ ಬದುಕು ಬರಹ : ಒಂದು ಅಧ್ಯಯನ | ಡಾ. ಎಸ್.ಬಿ. ಮಟ್ಟೋಳಿ | ೨೦೦೭ |
| ೫೪. ವಿಮೋಚನಾ ಸಂಘ : ಎರಡು ದಶಕಗಳ ಅವಲೋಕನ | ವ್ಹಿ.ಎಸ್. ಮನವಾಡೆ | ೨೦೦೭ |
| ೫೫. ಇದು ಭಾರತ | ಸುರೇಶ ವೆಂ. ಕುಲಕರ್ಣಿ | ೨೦೦೭ |
| ೫೬. ಬಸವಪ್ರಭು ಶ್ರೀ ಬಿ.ಎಲ್. ಪಾಟೀಲ ಅಭಿನಂದನ ಗ್ರಂಥ | ಪ್ರಸಂ.: ಡಾ. ಎಂ.ಎಂ. ಕಲಬುರ್ಗಿ | ೨೦೦೭ |
| ೫೭. ಅಥಣಿ ತಾಲೂಕು : ಸಾಹಿತ್ಯ ದರ್ಶನ | ಸಂ. ವ್ಹಿ.ಎಸ್. ಮಾಳಿ | ೨೦೦೮ |
| ೫೮. ಹಿಂದೂ ಧರ್ಮ (ಯಶಸ್ಸು ಮತ್ತು ಯಾತನೆ) | ಮೂಲ: ಎಸ್.ಕೆ. ಕುಲಕರ್ಣಿ<br>ಅ.: ಶೇಷಗಿರಿ ಹಾರನಹಳ್ಳಿ | ೨೦೦೯ |
| ೫೯. ಕೈಲಾಸ-ಮಾನಸ | ವೆಂಕಟೇಶ ಮಾಚಕನೂರ | ೨೦೧೦ |
| ೬೦. ಮಾಹಿತಿ ಹಕ್ಕು ಕಾನೂನು ೨೦೦೫ | ಶ್ರೀಪತಿ ಕಾಶೀಕರ,<br>ಎಂ. ಸುದರ್ಶನರಾಜ | ೨೦೧೧ |
| ೬೧. ಹಿಂದೂ ಸಮಾಜದಲ್ಲಿ ಮಹಿಳೆ | ಮೂಲ: ಎಸ್.ಕೆ. ಕುಲಕರ್ಣಿ<br>ಅ.: ಶೇಷಗಿರಿ ಹಾರನಹಳ್ಳಿ | ೨೦೧೧ |
| ೬೨. ದೇವರ ಮನುಷ್ಯರು | ಮೂಲ: ಡಾ॥ ಅನಿಲ ಅವಚಟ<br>ಅ.: ಚಂದ್ರಕಾಂತ ಪೋಕಳೆ | ೨೦೧೨ |
| ೬೩. ಬಸವಾದರ್ಶ | ಸಂ. ವ್ಹಿ.ಎಸ್. ಮಾಳಿ | ೨೦೧೪ |
| ೬೪. ಕೃಷಿ ತಂತ್ರಜ್ಞಾನ ಪ್ರವೀಣರು | ಡಾ॥ ವಿಜಯಕುಮಾರ ಗಿಡ್ನವರ | ೨೦೧೫ |
| ೬೫. ಬಸವಧರ್ಮ ದರ್ಶನ | ರಂಜಾನ್ ದರ್ಗಾ | ೨೦೧೫ |

* ಪ್ರಶಸ್ತಿ ಪುರಸ್ಕೃತ ಕೃತಿಗಳು
* ಪಠ್ಯ ಪುಸ್ತಕ – ಕರ್ನಾಟಕ ವಿಶ್ವವಿದ್ಯಾಲಯ ಎಂ.ಎ. ತರಗತಿಗೆ



## ಬಸವ ಬಡವರ ಬಸವ

ಬಸವ ಬಡವರ ಬಸವ ಕರುಣಾಸಾಗರ ಬಸವ।
ಅಲ್ಲಮನ ಪ್ರಾಣ ಬಸವ ಅಕ್ಕನ ಮಾನ ಬಸವ।
ಸರ್ವರೊಳು ಗುರುಸಂಗನ ಕಂಡ ಕಲ್ಯಾಣ ಬಸವ॥

ಬಸವ ನಿನ್ನಯ ವಾಸ ಕೂಡಲಸಂಗನ ಧ್ಯಾಸ।
ಸತ್ಯ ಸಾರುವ ಧೀಶ ನಿನ್ನ ನೆನೆಯುವ ಧ್ಯಾಸ।
ಮರೆತು ಬಾಳೆನಯ್ಯಾ ಬಸವ ನನ್ನುಸಿರು ನನ್ನ ಬಸವ॥

ಭೇದ ಅಳಿದವನೆ ಬಸವ ಪ್ರೀತಿ ತಿಳಿಸಿದವನೆ ಬಸವ।
ಜಾತಿ ಧರ್ಮಕೆ ಅತೀತನಾಗಿ ಮಾನವತೆಯ ಪ್ರಾಣ ಬಸವ॥

ಎಲ್ಲಾ ನನ್ನವರೆಂದು ಭೇದವಿಲ್ಲದ ಬಂಧು।
ಎಲ್ಲಾ ಮಾನವರೊಂದು ಎಲ್ಲರೂ ಶರಣರೆಂದು।
ಎಲ್ಲರೊಳು ತಾ ಕಿರಿಯನೆಂದು ತನ್ನ ತಾನು ತಿಳಿದ ಬಸವ॥

ಬಿಜ್ಜಳನಿಗೆ ಬಸವನೇ ಮಂತ್ರ; ಹಾರವನ ಸ್ಥಾನ ಅತಂತ್ರ।
ಕೊಂಡಿ ಮಂಚಣ್ಣನ ಕುತಂತ್ರ ಮಂತ್ರಿಪದವಿ ಬಿಟ್ಟುನಿಂತ।
ದೀನರಾ ಮಾನ ಬಸವ ಬಡವರ ಪ್ರಾಣ ಬಸವ॥

ಬಡಜಂಗಮರು ಶಿವನೆಂದು ಸಾರಿದ ಧೀರಬಸವ।
ಸಾಲಗುಂದಿಪುರದ ಜನರ ಪ್ರೀತಿಪ್ರಾಣವೆ ಬಸವ।
ಗುರುಪೀರಾ ಖಾದರಿಯ ಜೀವದಾಜೀವ ಬಸವ॥

ಗುರು ಖಾದರಿಪೀರಾ (1822-1896)
(ಕನ್ನಡದ ಮೊದಲ ಸೂಫಿ ಕವಿ)